ಶಾರದಾ ಗ್ರಂಥಮಾಲಾ,



# ಸುಖಲತಾ

ಇಂದಿರಾ, ಸತೀಪದ್ಮಿನೀ, ಸ್ನೇಹಲತಾ, ರಣಕೇಸರಿ ಮುಂತಾದ ಗ್ರಂಥಗಳ
ಪ್ರಣೇತರೂ, 'ಸರಸ್ವತಿ'ಯ ಸಂಪಾದಕರೂ ಆದ

**ಆರ್. ಕಲ್ಯಾಣಮ್ಮನವರಿಂದ**

ರಚಿಸಲ್ಪಟ್ಟಿತು



ಪ್ರಕಾಶಕರು

**ಶಾರದಾ ಗ್ರಂಥಮಾಲಾ,**

ಚಾಮರಾಜಪೇಟೆ, ಬೆಂಗಳೂರು ಸಿಟಿ.

—— . ೦ ——

ಮುದ್ರಣಕಾರರು

ಮಾಡಲ್ ಮುದ್ರಾಕ್ಷರಶಾಲಾ, ಬೆಂಗಳೂರು ಸಿಟಿ

1927.

**ಬೆಲೆ —೧೦ ಆಣೆ.**

# ವಿಷಯ ಸೂಚಿಕೆ.


| | |
|---|---|
| ೧ನೆಯ ಅಧ್ಯಾಯವು | ಸೌಂದರ್ಯ ರಮಣಿ |
| ೨ನೆಯ ಅಧ್ಯಾಯವು | ಶಾಂತಗುಣ |
| ೩ನೆಯ ಅಧ್ಯಾಯವು | ವಿನೋದಲಹರಿ |
| ೪ನೆಯ ಅಧ್ಯಾಯವು | ಸರ್ದಾರ್‌ಸಿಂಹ |
| ೫ನೆಯ ಅಧ್ಯಾಯವು | ಸಂಗೀತ ಸಂಭ್ರಮವು |
| ೬ನೆಯ ಅಧ್ಯಾಯವು | ಅಪ್ಪಣೆ ಕೊಡುವಿಕೆ |
| ೭ನೆಯ ಅಧ್ಯಾಯವು | ವಾದದಲ್ಲಿ ತೀರ್ಮಾನವು |
| ೮ನೆಯ ಅಧ್ಯಾಯವು | ಮಹಾರಾಜನ ಕ್ರೋಧವು. |
| ೯ನೆಯ ಅಧ್ಯಾಯವು | ಕನ್ಯಾಪಹಾರವು |
| ೧೦ನೆಯ ಅಧ್ಯಾಯವು | ಮಂಜುಳೆಯ ಮನೋರಾಜ್ಯವು |
| ೧೧ನೆಯ ಅಧ್ಯಾಯವು | ಪದ್ಮಲತೆಯ ದುಃಖವು |
| ೧೨ನೆಯ ಅಧ್ಯಾಯವು | ಮಂತ್ರಿಗಳ ತೀರ್ಮಾನವು |
| ೧೩ನೆಯ ಅಧ್ಯಾಯವು | ರಾಜಕುವರನ ಪೂರ್ವವೃತ್ತಾಂತ |
| ೧೪ನೆಯ ಅಧ್ಯಾಯವು | ಮನೋವ್ಯಾಕುಲವು |
| ೧೫ನೆಯ ಅಧ್ಯಾಯವು | ಅಂಧಕಾರಗುಹೆ |
| ೧೬ನೆಯ ಅಧ್ಯಾಯವು | ಅನಸೂಯಾ |
| ೧೭ನೆಯ ಅಧ್ಯಾಯವು | ಭಾರ್ಯಾಭರ್ತರು |
| ೧೮ನೆಯ ಅಧ್ಯಾಯವು | ವಿನೋದ ಸಂಭಾಷಣೆ |
| ೧೯ನೆಯ ಅಧ್ಯಾಯವು | ಪದ್ಮಲತೆಯ ಮನೋಚಾಂಚಲ್ಯ |
| ೨೦ನೆಯ ಅಧ್ಯಾಯವು | ಪರಸ್ಪರ ಸಂದರ್ಶನವು |
| ೨೧ನೆಯ ಅಧ್ಯಾಯವು | ಮಂಜುಳೆಯ ಗಾಂಭೀರ್ಯವು |
| ೨೨ನೆಯ ಅಧ್ಯಾಯವು | ವಿವಾಹ ಸಂಭ್ರಮವು |
| ೨೩ನೆಯ ಅಧ್ಯಾಯವು | ಧರ್ಮದರ್ಶನವು |

ಓಂ

# ಸುಖಲತಾ.

## ೧ನೆಯ ಅಧ್ಯಾಯವು

### ಸೌಂದರ್ಯ ರಮಣಿ



ಸಂಧ್ಯಾಕಾಲದ ಸೂರ್ಯನು ಸ್ವರ್ಣಮಯ ಕಿರಣಗಳಿಂದ ಕೂಡಿ ಪ್ರಕಾಶಿಸುತ್ತಿದ್ದನು ಕಂಗಳಿಗೂ, ಮನಕ್ಕೂ ಆನಂದವನ್ನುಂಟು ಮಾಡುವ ಕೆಂಬಣ್ಣವು ಎಲ್ಲೆಲ್ಲಿಯೂ ವ್ಯಾಪಿಸಿತು. ಅವ್ಯಾಜ ಕರುಣಾ ಮೂರ್ತಿಯಾದ ಸರ್ವೇಶ್ವರನ ಶಾಂತಸ್ಥಿತಿಯು ಅಜ್ಞಾನಿಗಳಾದ ನಮ್ಮ ಜ್ಞಾನ ಚಕ್ಷುಗಳಿಗೆ ಗೋಚರವಾಯಿತೋ ಎಂಬಂತೆ ಮನೋರಮ್ಯವಾಗಿದ್ದಿತು ಪ್ರಾಣಿಗಳಿಗೆ ಸುಖವೂ, ದುಃಖವೂ ಒಂದಾದಮೇಲೊಂದು ಬರುತ್ತಿರುವುದು ಸಹಜ ವಷ್ಟೆ—ಹೊಟ್ಟೆಗಿಲ್ಲವೆಂದು ಗೋಳಿಡುವವರು ಕೆಲವುಜನ, ತಾಯಿಯ ಮಾತನ್ನು ಲ್ಲಂಘಿಸಿ ಪತ್ನೀಸಹಿತ ಬೇರ ಸಂಸಾರವಮಾಡುತ್ತಿರುವನೆಂದು ನಿಂದಿಸುವರು ಕೆಲವರು, ತನ್ನಿಷ್ಟಪ್ರಕಾರ ಗಂಡನು ನಡೆಯಲಿಲ್ಲವಂದು ಕೊರಗುವವರು ಕೆಲವುಜನ, ಬೇ ಸದರೆ ನ್ಯಾಯಸ್ಥಾನದಲ್ಲಿ ತೀರ್ಪು ಹೇಳುವರಲ್ಲಿ ತನ್ನ ಗತಿಯೇನಾಯಿತೋ ಎಂದು ಕಲಿಬುವವರನೇಕ, ನಾಕಾದಷ್ಟು ವರಮಾನವಿಲ್ಲವೆಂದು ದುಃಖಿಸುವರಷ್ಟು ಜನವೋ? ಅಕ್ಕಸಾಲಿಗನ ಹತ್ತಿರ ಕೊಟ್ಟ ಒಡವೆಗಳನ್ನು ಏಕೆ ತರಲಿಲ್ಲವೆಂದು ಪತಿಯನ್ನು ದಂಡಿಸುವ ರಮಣಿಯರನೇಕ, ಆದಿನ ವಸೂಲಾದ ಅಸಲನ್ನು ಬಡ್ಡಿಸಮೇತ ಎಣಿಸಿ ಯಾರೂ ಕಾಣದಂತೆ ಪೆಟ್ಟಿಗೆಯಲ್ಲಿಟ್ಟು ಭದ್ರಪಡಿಸುವವರನೇಕ, ಯಾವ ಕೆಲಸವನ್ನೂ ಮಾಡದೆ ದಿವಾರಾತ್ರಿಗಳು ತಮ್ಮ ಸ್ವಂತವೆಂದೇ ಭಾವಿಸಿ, ವ್ಯರ್ಥ ಕಾಲ ಹರಣ ಮಾಡುವರೆಷ್ಟೋ ಜನ, ನೆರೆಹೊರೆಯವರನ್ನು ನೋಡಿ ಅಸೂಯೆ ಪಡತಕ್ಕ ವರೆಷ್ಟೋ ಜನ ಪ್ರಪಂಚದಲ್ಲಿರತಕ್ಕ ಮನುಷ್ಯರೆಲ್ಲರೂ ಒಂದೇ ವಿಧವಾದ ಸ್ವಭಾವ ವನ್ನು ಹೊಂದಿರುವುದು ಅಪರೂಪ ದೇಹರಚನೆಗೆ ತಕ್ಕಂತಹ ಸ್ವಭಾವವೂ, ಗುಣವೂ ಸೃಷ್ಟಿಸಲ್ಪಟ್ಟಿರುವುದು ಎಲ್ಲರೂ ವಿವೇಕ ಚೂಡಾಮಣಿಗಳಾಗಿಯಾಗಲಿ ಅವಿವೇಕಿ ಗಳಾಗಿಯಾಗಲಿ ಇರುವುದು ಅಪರೂಪ ಏಕಕಾಲದಲ್ಲಿ ಮಾನವರು ಸತ್ಯಮಾರ್ಗಾವ

ಲಂಬಿಗಳಾಗುವುದು ಸಾಧ್ಯವೇ? "ಲೋಕೋಭಿನ್ನರುಚಿಃ" ಎಂಬಂತೆ ಸಜ್ಜನರಿಂದಲೂ, ದುರ್ಜನರಿಂದಲೂ ಈ ಪ್ರಪಂಚವು ತುಂಬಿರುವುದು.

ಜ್ಯೋತಿಪುರವಲ್ಲಿ ಚಂದ್ರಮೌಳೀಶ್ವರನ ದೇವಾಲಯವೊಂದಿದ್ದಿತು ಆರ್ಯರಿಗೆ ಪರಮೇಶ್ವರನನ್ನೂ ಪಾರ್ವತೀದೇವಿಯನ್ನೂ ಪೂಜಿಸುವುದೆಂದರೆ ಪರಮಾನಂದವು ನಗರವಾಸಿಗಳೆಲ್ಲರೂ ಆ ಸಂಧ್ಯಾಕಾಲವನ್ನು ನೋಡಿ ತಮತಮಗೆ ತೋರಿದಂತೆ ಅಭಿಪ್ರಾಯಪಡುತಿದ್ದರು. ಪುರವಾಸಿಗಳು ಅನ್ಯೋನ್ಯವಾಗಿದ್ದುದರಿಂದ ಒಬ್ಬರ ಇಂಗಿತವನ್ನು ಮತ್ತೊಬ್ಬರು ಅರಿತು ನಡೆದು ಆನಂದಪಡುತ್ತಿದ್ದರು.

ಆ ನಗರದಲ್ಲೊಂದು ನದಿಯು ಕಿಲಕಿಲ ನಿನಾದಗೈಯುತ್ತ ಅರಮನೆಯ ಸಮೀಪದಲ್ಲಿ ಪ್ರವಹಿಸುತಿದ್ದಿತು ಶಾಂತವದನಳಾದ ರಮಣಿಯೊಬ್ಬಳು ಆ ನದಿಯ ತೀರದಲ್ಲೊಂದು ವೃಕ್ಷದ ಕೆಳಗಿದ್ದುದೊಂದು ಶಿಲಾಸನದ ಮೇಲೆ ಗಂಭೀರವಾಗಿ ಕುಳಿತಿದ್ದಳು ಅವಳ ಕೈಗಳಲ್ಲಿ ಧರಿಸಿದ್ದ ರತ್ನಕಂಕಣಗಳು ಫಳಫಳನೆ ಪ್ರಕಾಶಿಸುತಿದ್ದವು ಜಲರಾಶಿಯನ್ನು ಅತ್ಯಾನಂದದಿಂದ ನೋಡುತಿದ್ದವಳು ನಿರ್ಮಲಾಕಾಶವನ್ನು ಮೇಘವಾವರಿಸಿದಂತೆ ಚಿಂತಾಕುಲಳಾದಳು ಇದಕ್ಕೆ ಕಾರಣವನ್ನಾರು ಬಲ್ಲರು? ಸೂರ್ಯನು ಪಶ್ಚಿಮಗಿರಿಯನ್ನಡರಿದನೆಂತಲೋ, ತಾನು ಒಂಟಿಯಾಗಿರುವೆನೆಂದೋ, ಮನೋವ್ಯಾಕುಲವೇನಾದರೂ ಇದ್ದಿತೋ? ಆದರ ಅವಳ ರೂಪರಾಶಿಯನ್ನು ನೋಡಿದರೆ ಅಂತಹ ಕಾರಣಗಳಿವೆಯೆಂದೂಹಿಸಲಾಗುವುದಿಲ್ಲವಾದರೂ ಅವಳ ವ್ಯಾಕುಲವೇತರಿಂದುಂಟಾಯಿತೆಂಬ ಸಂಶಯವು ಮಾತ್ರ ಉಂಟಾಗುವುದು ಹದಿನೆಂಟು ವಯಸ್ಸುಳ್ಳ ಬಾಲಿಕೆಯು ಕಣ್ಣುಗಳಲ್ಲಿ ನೀರು ಸುರಿಸುತ್ತಾ 'ಅಮ್ಮ" ಎಂದು ಹೇಳಿ ನಿಟ್ಟುಸಿರು ಬಿಟ್ಟಿದ್ದು ಮನೆಯಕಡೆ ಹೊರಟಳು

ನದಿಯಿಂದವಳ ಮನೆಗೆ ಸುಮಾರು ಎರಡು ಫರ್ಲಾಂಗಿನಷ್ಟು ದೂರವಿರಬಹುದು ಅಂತರಿಕ್ಷದಿಂದಿಳಿದುಬಂದ ಇಂದ್ರ ವಿಮಾನದಂತೆ ಆ ರಮಣಿಯ ಸುಂದರ ಮಂದಿರವು ಶೋಭಿಸಿತು ಮನವನ್ನಾವರಿಸಿದ್ದ ದುಃಖವು ಹೆಚ್ಚುತಿರಲು ಗೃಹವನ್ನು ಪ್ರವೇಶಿಸದೆ ಆ ರಮಣಿಯು ಬೇಸತ್ತವಳಾಗಿ ಹೊರಗಿದ್ದುದೊಂದಾಸನದಲ್ಲಿ ಕುಳಿತು ನಾನಾ ವಿಧವಾಗಿ ಆಲೋಚಿಸತೊಡಗಿದಳು ಸ್ವಲ್ಪಹೊತ್ತು ಕುಳಿತಿದ್ದವಳು ತನ್ನ ಚಿಂತೆಯು ನೀಗದಿದ್ದುದನ್ನುಕಂಡು ಉಕ್ಕಿಬರುವ ಕಣ್ಣೀರನ್ನೊರಸಿಕೊಂಡವಳಾಗಿ ಆ ಉದ್ಯಾನವನದಲ್ಲಿ ಶತಪಥ ತಿರುಗಲಾರಂಭಿಸಿದಳು.

ಜ್ಯೋತಿಪುರಿಗೂ, ಈ ರಮಣಿಯ ಮಂದಿರವಿದ್ದ ಸ್ಥಳಕ್ಕೂ ಒಂದುಮೈಲಿನಷ್ಟು

ಪೂರವಿದ್ದಿತು ನಗರವು ವಿಪ್ರರಿಂದಲೂ, ಇತರ ವರ್ಣದವರಿಂದಲೂ ತುಂಬಿದ್ದಿತು. ಎಲ್ಲಿ ನೋಡಿದರೂ ಭತ್ತದಪೈರುಗಳೂ, ಕಬ್ಬು, ಹಚ್ಚಗಿರುವ ಬಾಳೆಯ ಮರಗಳೂ ಕೋಮಲವಾದ ಮಾವಿನ ಮರಗಳೂ, ತೆಂಗು, ಹಲಸು ಮೊದಲಾದ ವೃಕ್ಷಗಳೂ ನೀರು ಸಾಕಾದಷ್ಟಿದ್ದುದರಿಂದ ಫಲವತ್ತಾಗಿ ಬೆಳೆದಿದ್ದವು ಪ್ರಸಿದ್ಧವಾದ ಚಂದ್ರ ಮೌಳೀಶ್ವರ ದೇವಾಲಯವೂ, ಅದರ ಸಮೀಪದಲ್ಲಿ ಕಿಲಕಿಲ ನಿನಾದ ಗೈಯುತ ಗಾಂಭೀರ್ಯದಿಂದ ಪ್ರವಹಿಸುತಿದ್ದ ನದಿಯೂ, ಸಮೀಪದಲ್ಲಿದ್ದ ಚಿಕ್ಕಚಿಕ್ಕ ಗುಡ್ಡ ಗಳೂ, ಮಂಟಪಗಳೂ ನೋಡುವರ ಮನವನ್ನಾಕರ್ಷಿಸುತಿದ್ದವು ರಮಣಿಯ ಮಂದಿರದ ಹಿಂಭಾಗದಲ್ಲಿಯೇ ನದಿಯು ಹರಿಯುತಿದ್ದಿತು. ಈ ಕನ್ಯಾಮಣಿಯು ಯಾರಾಗಿರಬಹುದು? ಇವಳ ದುಃಖಕ್ಕೆ ಕಾರಣವೇನಿರಬಹುದು? ಅವಳು ಒಂಟಿ ಯಾಗಿ ಆ ವನದಲ್ಲಿರುವ ಕಾರಣವೇನು?--ಇವುಗಳನ್ನು ಯೋಚಿಸಿದರೆ ಆಶ್ಚರ್ಯವಾಗು ವುದು ಒಬ್ಬರೊಡನೆ ಪಳಗಿದರಲ್ಲವೇ ಅವರ ಸ್ವಭಾವಗುಣಗಳು ತಿಳಿಯುವುದು? ವೇದಾಂತ, ಶಾಸ್ತ್ರ, ಜ್ಯೋತಿಷ್ಯ, ಜ್ಞಾನದೃಷ್ಟಿ ಮೊದಲಾದವುಗಳ ಸಹಾಯದಿಂದ ರಿತು ಹೇಳುವುದೂ ಕೂಡ ಈ ಕಾಲದಲ್ಲತಿಕಷ್ಟವಾಗಿರುವುದು ನಂಬುವರೂ ಅತಿ ವಿರಳ ಇವಳೇನು ಮಾನವಿಯೋ, ಮೋಹಿನಿಯೋ ಅರಿತವರಾರು? ಯವ್ವನ ರಸವು ತುಂಬಿ ತುಳುಕುತಿದ್ದಿತು. ಅವಳ ಕೇಶರಾಶಿಯು ಶಿರದಿಂದ ಭೂಮಿಯವರಗೆ ಒಂದೇ ಸಮನಾಗಿ ಬೆಳೆದು ಸ್ಥಳ ಸಾಲದೆ ನೆಲದಲ್ಲಿ ಹೊರಳುತಿದ್ದಿತು ಅವಳು ವನದೇವತೆಯಂತೆ ಬೆಳಗುತಿದ್ದಳು ಹಸುಗಳು ಒಂದರಹಿಂದೊಂದಾಗಿ ಇವಳಿದ್ದ ವನವನ್ನು ಪ್ರವೇಶಿಸಿದವು ಮುದ್ದಾದ ಕರುಗಳು ಅವುಗಳ ಹಿಂದೆ ನೆಗೆಯುತ್ತಾ ಕುಣಿಯುತ್ತಾ ಒರುತ್ತಿರುವುದನ್ನು ಕಂಡು, ರಮಣಿಯು ಆನಂದದಿಂದವುಗಳನ್ನು ಹಿಡಿದುಕೊಂಡು ಅವುಗಳೊಡನೆ ವಿನೋದವಾಗಿ ಆಡುತ್ತಿರುವ ನೋಟವು ಕಣ್ಣಿಗೆ ಗತ್ಯಾನಂದವನ್ನುಂಟುಮಾಡುತಿದ್ದಿತು ಸ್ವಲ್ಪ ಹೊತ್ತಾದ ಕೂಡಲೇ ''ಸುಖಲತಾ'' ಎಂದು ಯಾರೋ ಕೂಗಿದಂತಾಗಲು, ರಮಣಿಯು ಆಕಡೆ ತಿರುಗಿನೋಡಲು ತನ್ನ ಜೀವಗೆಳತಿಯಾದ ಪದ್ಮಲತೆಯೆಂದರಿತು ಅವಳೊಡನೆ ಸಂಭಾಷಿಸತೊಡಗಿದಳು—

**ಸು ಖ ಲ ತೆ**-ಪದ್ಮಾ, ಇಷ್ಟುಹೊತ್ತು ಎಲ್ಲಿ ಹೋಗಿದ್ದೆ ?

**ಪದ್ಮಲತೆ**-ಪ್ರಿಯಸಖೀ, ನಿನ್ನ ಮುಖವು ಬಾಡಿರುವ ಕಾರಣವೇನು? ಕಣ್ಣೀರು ಸುರಿಸಿದೆಯೇನೋ?

**ಸು ಖ ಲ ತೆ**-ಪದ್ಮಾ, ಅದಿರಲಿ. ನೀನು ಹೋದ ವಿಷಯವೇನಾಯಿತು?

**ಪದ್ಮಲತೆ**-ನಿನ್ನ ತಂದೆಯು ನಾಳೆಯ ದಿನ ಇಲ್ಲಿಗೆ ಬರುವರಂತೆ. ಆಳುಗಳು ರಸ್ತೆಯನ್ನು ದುರಸ್ತುಮಾಡುತ್ತಲಿರುವರು. ತೋರಣ, ಬಾವುಟ ಮೊದಲಾದವುಗಳು ಕಟ್ಟಲ್ಪಡುತ್ತಿರುವವು.

**ಸುಖಲತೆ**-ಯಾತಕ್ಕಾಗಿ ಬರುವರಂತೆ? ಚಿಕ್ಕಮ್ಮನೂ ಬರುವಳೇ? ಊರಿನಲ್ಲೆಲ್ಲರೂ ಸುಖವಾಗಿರುವರಷ್ಟೆ!

**ಪದ್ಮಲತೆ**-ಎಲ್ಲರೂ ಸುಖವಾಗಿರುವರು. ಎಷ್ಟು ಕಷ್ಟಪಟ್ಟಾದರೂ ನಿನ್ನನ್ನು ತನ್ನ ತಮ್ಮನಿಗೆ ಮದುವೆಮಾಡಿಸಬೇಕೆಂದು ನಿನ್ನ ತಂದೆಯನ್ನು ಕೇಳಿದ್ದಾಗಿಯೂ, ಆ ವಿಷಯವಾಗಿ ಮಾತನಾಡಲು ನಿನ್ನ ತಂದೆಯು ಇಲ್ಲಿಗೆ ಬರುವರೆಂಧೂ ಅವರಿವರು ಹೇಳುವುದರ ಮೂಲಕ ಅರಿತೆನು.

**ಸುಖಲತೆ**-ವಿವಾಹವೇ? ಅದಾರಿಗೆ? ಚಿಕ್ಕಮ್ಮನ ಸಹೋದರನಾದ ಮಾನಸಿಂಹನಿಗೆ ನಾನು ಅರ್ಹಳೇ? ಮಾನಸಿಂಹನು ಮಾತ್ರ ಇಷ್ಟಪಟ್ಟಲ್ಲಿ ಅನೇಕಜನ ಪದ್ಮಿನೀಜಾತಿಯ ಸ್ತ್ರೀಯರೂ, ರಾಜಪುತ್ರಿಯರೂ ಕಾಸಿಗೊಂದು ಕೊಸರಿಗೆರಡಾಗಿ ದೊರೆಯುವರು. ಕುರೂಪಿಯೂ, ಗುಣಹೀನಳೂ ಆದ ನನ್ನನ್ನೆಂದಿಗೂ ಬಯಸನೆಂದು ಆದಿನ ಚಿಕ್ಕಮ್ಮನು ಹೇಳುತಿದ್ದುದನ್ನು ನೀನು ಕೇಳಲಿಲ್ಲವೇ? ಅದನ್ನಾಗಲೇ ಮರೆತೆಯಾ?

**ಪದ್ಮಲತೆ**-ಈಗ ಮಾತ್ರ ನಿಮ್ಮಮ್ಮನು ಜೀವಿಸಿದ್ದರೆ ಎಷ್ಟಾನಂದಪಡುತಿದ್ದಳೋ? ಈ ಭೂಲೋಕದಲ್ಲಿರಲಿಷ್ಟವಿಲ್ಲದೆ ಅಂತರ್ಧಾನಳಾದಳು. ಮಾನಸಿಂಹನು ನಾನಾವಿಧ ಅಲಂಕಾರಗಳನ್ನು ಮಾಡಿಕೊಂಡು ಅಟ್ಟಹಾಸಮಾಡುತ್ತಿರುವನು. ಬಹುಶಃ ಆತನೂ ನಾಳೆಯದಿನ ಬರಬಹುದು

**ಸುಖಲತೆ**-ಮತ್ತೇನಾದರೂ ವಿಶೇಷ ವರ್ತಮಾನವುಂಟೆ? ರಾಜಗೃಹದಲ್ಲೆಲ್ಲರೂ ಸೌಖ್ಯವಷ್ಟೆ? ನನ್ನ ಕ್ಷೇಮಲಾಭವನ್ನಾರಾದರೂ ವಿಚಾರಿಸಿದರೇ? ನನ್ನ ವಿಷಯದಲ್ಲಿ ತಂದೆಗೆ ಪೂರ್ಣ ಸಮ್ಮತವಿರುವುದೇ? ಈ ವರ್ತಮಾನಗಳನ್ನೆಲ್ಲಾ ನೀನರಿತ ಬಗೆ ಹೇಗೆ? ವಿವರವಾಗಿ ಹೇಳು.

**ಪದ್ಮಲತೆ**--ತಂದೆಯ ಅಂತರಂಗವನ್ನರಿಯುವುದು ಬಹಳ ಕಷ್ಟವು ಒಂದೊಂದು ಸಲ ಸತಿವಾಕ್ಯವನ್ನಸಡ್ಡೆಮಾಡುವಂತೆ ತೋರುವುದು ಚಿಕ್ಕಮ್ಮನು ಚಂಡಿಯವತಾರ ತಾಳಿದಾಗ ಅವಳಿಗೆ ದಾಸಾನುದಾಸನಾಗುವರು

**ಸುಖಲತೆ**-ಪದ್ಮಾ, ಯಾವುದು ಹೇಗಾದರೆ ನನಗೇನು? ಭಗವಂತನು ನನ್ನನ್ನು ಈ ಲೋಕದಲ್ಲಿ ಜೀವಸಹಿತ ಇಟ್ಟಿರುವುದು ಬಹಳ ಅನ್ಯಾಯವು. ಕಷ್ಟವನ್ನು ಅನುಭವಿಸಬೇಕೆಂದೇ ನಾನು ಹುಟ್ಟಿದೇನೆ ಪಿತನ ಮನೋವ್ಯಾಕುಲವೂ, ಚಿಕ್ಕಮ್ಮನ ಕೋಪವೂ, ಬಂಧುಗಳ ಅನಾದರಣೆಯೂ, ಏಕಾಂತವಾಸವೂ ನನಗಾಗಿಯೇ ನಿರ್ಮಿಸಲ್ಪಟ್ಟಿರುವಂತೆ ತೋರುವುದು. ಇದೆಂತಹ ಬಾಳು?

**ಪದ್ಮಾ**-ಸಖೀ, ಚೆನ್ನಾಯಿತು. ರಾಜಪುತ್ರಕುಲದಲ್ಲಿ ಜನಿಸಿದ ನೀನು ಎದೆಗುಂದಿದರೆ ಮತ್ತೇನು ಹೇಳಬೇಕು? ಸ್ತ್ರೀ ಜನ್ಮವು ತುಚ್ಛವಾದುದೆಂಬ ಭಾವನೆಯು ಅರ್ಯಾವರ್ತದ ರಮಣಿಯರ ಹೃದಯದಲ್ಲಿ ಬೇರೂರುತ್ತ ಬಂದಂತೆಲ್ಲಾ ನಾವು ಪುರುಷರ ಮೋಹವಸ್ತುವಾಗಿ, ಕ್ರೀಡಾವಸ್ತುವಾಗಿ, ನಮ್ಮ ಧೈರ್ಯ-ಸ್ಥೈರ್ಯ-ತೇಜಸ್ಸನ್ನು ಕಳೆದುಕೊಂಡು ಅಬಲಾ ನಾಮವನ್ನು ಸಾರ್ಥಕವಮಾಡಿಕೊಳ್ಳುವೆವು. ನಮ್ಮ ದುರ್ದೆಶೆಗೆ ನಮ್ಮ ಅಧೈರ್ಯವೇ ಕಾರಣ ಧೈರ್ಯಹೊಂದು. ತನ್ನನ್ನು ಮರೆಹೊಕ್ಕವರನ್ನು ಭಗವಂತನೆಂದೂ ಕೈಬಿಡನು ಈಶ್ವರದತ್ತವಾದ ಜ್ಞಾನಮಣಿಯನ್ನು ಧೈರ್ಯವೆನ್ನುವ ಕುಂದಣದಲ್ಲಿ ಬಿಗಿದು ಧರಿಸಿದವರೆಂದಿಗೂ ಕೇಡುಂಟಾಗದು.

**ಸುಖಲತೆ**--ಪದ್ಮಾ, ಬಂದದ್ದನ್ನೆಲ್ಲಾ ಅನುಭವಿಸಲು ಸಿದ್ಧಳಾಗಿರುವೆನು. ಪಿತನ ಕೋಪಕ್ಕೂ, ಶಾಪಕ್ಕೂ ಹೆದರುವಳಲ್ಲ. ನೂರುಜನ ಚಿಕ್ಕಮ್ಮಂದಿರು ಅಂತರಿಕ್ಷದಿಂದ ಧುಮಿಕಿದರೂ ಅವರಿಷ್ಟದಂತೆ ನಡೆಯೆನು. ಪತ್ನಿಯಿಲ್ಲದ ಸಂಕಟಕ್ಕಾಗಿ ತಂದೆಯು ಹೆಣ್ಣೊಂದಿದ್ದರ ಸಾಕೆಂದು ಹೀನಜಾತಿಯವಳನ್ನು ವರಿಸಿದನು. ಕುಲಹೀನನನ್ನು ನಾನದೇಕೆ ವರಿಸಬೇಕು? ಬಹಿಃರೂಪವನ್ನು ಕಂಡು ಮೋಸಹೋಗತಕ್ಕವಳು ನಾನಲ್ಲ ಮಾನಸಿಂಹನು ಚಕ್ರವರ್ತಿಪದವಿಯನ್ನು ಹೊಂದಿದಾಗ್ಯೂ ಅವನನ್ನು ವರಿಸಲು ನನ್ನ ಮನವೊಪ್ಪದು, ಇದು ಸತ್ಯವು ನಾಳೆಯದಿನ ತಂದೆಯು ಬಂದರೆ ಹೀಗೆಂದು ಖಂಡಿತ ಹೇಳಿಬಿಡುವೆನು ಅವರು ಪದೇಪದೇ ಬಲಾತ್ಕಾರ ಮಾಡುವುದೇಕೆ?

**ಪದ್ಮಲತೆ**--ಸ್ತ್ರೀಯರ ಸ್ಥೈರ್ಯ-ಧೈರ್ಯಗಳನ್ನು ಪರೀಕ್ಷಿಸುವುದಕ್ಕೆಂದೇ ಇಂತಹ ಕಷ್ಟಗಳನ್ನು ಭಗವಂತನು ಪದೇಪದೇ ತಂದೊಡ್ಡುತ್ತಿರುವನು. ಸುಖಲತಾ, ಕುಲಹೀನನೂ, ಗುಣಶೂನ್ಯನೂ, ಮತಿಹೀನನೂ, ಸ್ತ್ರೀ ಲೋಲನೂ ಆದ ಮಾನಸಿಂಹನು ಎಂದೂ ನಿನ್ನ ಪತಿಯಾಗನು. ಚಂದ್ರಮೌಳೀಶ್ವರನು ನಿನಗನು

ರೂಪಸನಾದ ವರನನ್ನು ಸೃಷ್ಟಿಸಿರಬಹುದು. ನಾನಿಲ್ಲದಿದ್ದಾಗ ಆದಿಯಲ್ಲಿ ನಡೆದ ವಿಷಯಗಳನ್ನು ಜ್ಞಾಪಿಸಿಕೊಂಡು ದುಃಖಿಸುತ್ತಿದ್ದಂತೆ ಕಾಣುತ್ತದೆ. ರಾತ್ರಿ ಬಹಳ ಹೊತ್ತಾಗಿದೆ, ನಡೆ, ಹೋಗೋಣ.

ಸುಖಲತೆಯು ಪದ್ಮಲತೆಯ ಭುಜದಮೇಲೆ ಹಸ್ತವನ್ನಿಟ್ಟು--ಪ್ರಿಯಪದ್ಮಾ, ನೀನಿಲ್ಲದಿದ್ದರೆ ನಾನೀ ಪ್ರಪಂಚದಲ್ಲಿ ಜೀವಿಸಿರಲಾರೆನು. ನನಗಾಗಿಯೇ ಬ್ರಹ್ಮನು ನಿನ್ನನ್ನು ಸೃಷ್ಟಿಸಿರುವಂತೆ ಕಾಣುತ್ತದೆ. ಕಾಲ ವ್ಯತ್ಯಾಸವನ್ನು ನೋಡಿದೆಯಾ! ಅರವತ್ತು ವರ್ಷ ವಯಸ್ಸುಳ್ಳ ನನ್ನ ತಂದೆಯು ಪುನಃ ವಿವಾಹವಾಗಿ ಅಂದಿನಿಂದ ಸದ್ಬುದ್ಧಿಯನ್ನು ನೀಗಿ, ಪರೋಪದೇಶಕ್ಕೆ ಕಿವಿಗೊಟ್ಟು ಮನಬಂದಂತೆ ನಡೆಯುತ್ತಿರುವರು-ಎಂದು ದುಃಖಿಸಲು, ಪದ್ಮಲತೆಯು ಅವಳನ್ನು ಸಂತೈಸಿ ಅರಮನೆಗೆ ಕರೆದುಕೊಂಡು ಹೋದಳು.

## ಎರಡನೆಯ ಅಧ್ಯಾಯವು.

### ಶಾಂತಗುಣ.




ತಿಪುರದಲ್ಲಿ ಅಮರಸಿಂಹನು ರಾಜ್ಯಭಾರಮಾಡುತಿದ್ದನು. ಅವನು ಧೀರಪುರುಷನು, ಸುಲಕ್ಷಣನು, ಧಾರ್ಮಿಕನಾಗಿಯೂ, ಸತ್ಯಶೀಲನಾಗಿಯೂ ಇದ್ದನು. ಈತನ ಆಳ್ವಿಕೆಯಲ್ಲಿದ್ದ ಪ್ರಜೆಗಳು ಕಷ್ಟವೆಂದರೇನೆಂಬುದನ್ನರಿಯದೆ ಸುಖದಿಂದಿದ್ದರು. ಅಮರಸಿಂಹನಿಗೆ 'ಸರಸ್ವತಿ' ಎನ್ನುವ ಸತಿಯಿದ್ದಳು. ಪಾತಿವ್ರತ್ಯವನ್ನೇ ಭೂಷಣವಾಗಿ ಧರಿಸಿದ ಈ ಉತ್ತಮರಮಣೀರತ್ನವು ಪತಿಯೇ ಪರದೈವವೆಂದೂ, ಪತಿವಾಕ್ಯವೇ ವೇದವಾಕ್ಯವೆಂದೂ ತಿಳಿದು ಅವುಗಳನ್ನೇ ದಿನಚರ್ಯವನ್ನಾಗಿ ಅನುಸರಿಸುತ್ತಿದ್ದಳು. ಸರಸ್ವತಿಯು ಜೀವಿಸಿದ್ದವರೆಗೆ ಮಹಾರಾಜನು ಕಷ್ಟವೆಂದರೇನೆಂಬುದನ್ನರಿತಿರಲಿಲ್ಲ. ತನ್ನನಂತರ ಪಟ್ಟಕ್ಕಧಿಕಾರಿಗಳಿಲ್ಲವೆಂದು ಮಹಾರಾಜನು ಚಿಂತಿಸಿದನಾದರೆ, ಸರಸ್ವತಿಯು ತನ್ನ ಪತಿಯ ಮನೋವ್ಯಾಕುಲವನ್ನು ನೀಗಿಸಬೇಕೆಂದು ಭಕ್ತಿಯಿಂದ ಪ್ರಾರ್ಥಿಸುತ್ತಿದ್ದಳು.

ಕೆಲವು ದಿನಗಳು ಕಳೆದನಂತರ ಈ ಉತ್ತಮ ರಮಣೀರತ್ನಕ್ಕೊಂದು ಕನ್ಯಾರತ್ನವುದಯಿಸಿತು. ರಾಜಾ ಅಮರಸಿಂಹನ ಮನವಾನಂದದಿಂದುಬ್ಬಿತು. ಕುಮಾ

ರಿಗೆ ' ಸು ಖ ಲ ತಾ ' ಎಂದು ನಾಮಕರಣಮಾಡಿದರು. ರಾಜಕುಮಾರಿಯು ತಾಯಿಯಂತೆ ಸೌಂದರ್ಯವತಿಯಾಗಿಯೂ, ತಂದೆಯಂತೆ ವೀರರಸಭರಿತಳಾಗಿಯೂ, ಪೌರ್ಣಮಿಯ ಚಂದ್ರನಂತೆ ಪ್ರವರ್ಧಮಾನಳಾಗುತಿದ್ದಳು. ರಾಜಾ ಅಮರಸಿಂಹನು ತನ್ನ ಕುಮಾರಿಗೆ ಪ್ರಖ್ಯಾತರಾದ ಪಂಡಿತರ ಮೂಲಕ ಸಕಲ ವಿದ್ಯೆಗಳನ್ನೂ ಕಲಿಸುವುದಕ್ಕೆ ಏರ್ಪಾಡುಮಾಡಿದನು. ಸುಂದರವತಿಯಾದ ಸುಖಲತೆಯು ಕೆಲವು ವರ್ಷಗಳಲ್ಲಿ ವಿದ್ಯಾಲತೆಯಾದಳು. ಮಧುರವಾದ ಭಾಷಣ, ಶಾಂತಗುಣ, ದೈವಭಕ್ತಿ ಇತ್ಯಾದಿ ಗುಣಗಳು ಈ ರಮಣಿಯಲ್ಲಿ ಮೂರ್ತೀಭವಿಸಿದ್ದವು ಕುಮಾರಿಯ ಸದ್ಗುಣಗಳನ್ನು ಕಂಡು ಮಹಾರಾಣಿಯು ಪುಳಕಾಂಕಿತಳಾಗಿ ಚಂದ್ರನನ್ನು ಕಂಡ ಸಾಗರದಂತುಬ್ಬಿದಳು. ಮಾತೆಗೆ ಸಮತೂಗುವ ವಸ್ತುವು ಈ ಪ್ರಪಂಚದಲ್ಲಿ ಮತ್ತ್ಯಾವುದಿರುವುದು ? ಸರಸ್ವತಿಗೆ ಸಮಾನರಾದವರು ಬ್ರಹ್ಮ ಸೃಷ್ಟಿಯಲ್ಲೇ ಇಲ್ಲವೆಂದು ಪುರಜನರು ಕೊಂಡಾಡಿದರು. ರಾಜಾ ಅಮರಸಿಂಹನೂ ಪರಮಾನಂದ ಭರಿತನಾದನು

ಸರಸ್ವತಿಯ ಉತ್ತಮಜೀವವು ಈ ಲೋಕದಲ್ಲಿ ನೆಲಸಿರಲಿಲ್ಲ. ಸುಖಲತೆಯ ಹದಿನಾಲ್ಕನೆಯ ವಯಸ್ಸಿನಲ್ಲಿ ಸರಸ್ವತಿಯು ಮತ್ತೊಂದು ಗರ್ಭವನ್ನು ಧರಿಸಿದ ಕೆಲವು ದಿನಗಳಿಗೆ ಗರ್ಭಸ್ರಾವವಾಗಿ ಅದೇ ಕಾರಣದಿಂದ ಕೆಲವು ದಿನಗಳಲ್ಲಿ ಮರಣ ಹೊಂದಿದಳು. ಮಾತೆಯ ವಿಯೋಗದಿಂದ ಮಹಿಳೆಯು ಬಹಳ ದುಃಖಹೊಂದಿದಳು ಅಮರಸಿಂಹನೂ ಬಹಳ ದುಃಖಿಸಿದನಾದರೂ, ಮಾತೃಹೀನಳಾದ ಕನ್ಯೆಯನ್ನು ಅತಿ ಪ್ರೇಮದಿಂದ ಸಲಹುತಿದ್ದನು.

ಕೆಲವು ದಿನಗಳು ಕಳೆದವು. ದಿನಕಳೆಯುತ್ತ ಬಂದಂತೆಲ್ಲಾ ಮಾನವಚಿತ್ತವು ಬದಲಾವಣೆ ಹೊಂದುವುದು. ಮಹಾರಾಜನ ದುಃಖವು ಕ್ರಮೇಣ ಕಡಮೆಯಾಗುತ್ತ ಬಂದು ಕೆಲವು ದಿನಗಳಾದನಂತರ ಸಾಮಂತರಾಜನೊಬ್ಬನ ಪುತ್ರಿಯು ಅತಿರೂಪವತಿಯೆಂಬುದನ್ನರಿತು ಅವಳನ್ನು ವಿವಾಹವಾದನು ಅವಳ ಹೆಸರು ಮಂಜುಳ. ವಿವಾಹವಾಗಿ ಪತಿಗೃಹಕ್ಕೆ ಬಂದುದೇ ತಡ ಮಂಜುಳೆಯು ತನ್ನ ಸರಕನ್ನು ಹರಡ ತೊಡಗಿದಳು. ತನ್ನಧಿಕಾರ, ಆಡಂಬರ, ಅಟ್ಟಹಾಸಗಳನ್ನು ಪ್ರದರ್ಶಿಸತೊಡಗಿದಳು ಚೇಳುಕಚ್ಚಿದ ವಿಷದಂತೆ ಕ್ಷಣ ಕ್ಷಣಕ್ಕೆ ತಾನು ಮಹಾರಾಣಿಯೆನ್ನುವ ಗರ್ವವು ಹೆಚ್ಚುತ್ತಬಂದಿತು. ರಾಜಕುಮಾರಿಯಾದ ಸುಖಲತೆಗೆ ನಡೆಯುತ್ತಿದ್ದ ಆದರೋಪಚಾರಗಳನ್ನು ನೋಡಿ ಸಹಿಸದವಳಾದಳು ·ಮಹಾರಾಜನನ್ನು ತನ್ನ ಸ್ವಾಧೀನಪಡಿಸಿಕೊಂಡು ತನ್ಮೂಲಕ ರಾಜಕುಮಾರಿಯನ್ನು ದೂರದಲ್ಲಿಡಬೇಕೆಂದು ಯೋಚಿಸಿದಳು

ರಾಜಾ ಅಮರಸಿಂಹನು ಅಲ್ಪಮತಿಯುಳ್ಳವನಲ್ಲ. ಕರ್ಮಸಂಬಂಧದಿಂದ ವಿವಾಹವಾಯಿತೇ ಹೊರತು, ಮಂಜುಳೆಯು ಹೇಳಿದಂತೆಲ್ಲ ನಡೆಯಲು ಅವನ ಮನ ವೊಪ್ಪಲಿಲ್ಲ. ಸುಖಲತೆಯ ಮಂದಿರವು ದೂರದಲ್ಲಿದ್ದಿತು. ದಾಸ-ದಾಸೀ-ಪರಿಜನರೂ ಪ್ರತ್ಯೇಕವಾಗಿದ್ದರು. ಪ್ರಾತಃಸಂಧ್ಯಾಕಾಲಗಳಲ್ಲಿ ಪುತ್ರಿಯನ್ನು ಕಾಣಲು ಮಹಾ ರಾಜನು ಬರುವನು. ತಂದೆಯೂ, ಮಗಳೂ ಪ್ರೀತಿಯಿಂದಿರುವುದನ್ನು ಕಂಡ ಮಂಜುಳೆಗೆ ಅಸೂಯೆಯುಂಟಾಯಿತು. 'ಇದನ್ನು ತಪ್ಪಿಸಬೇಕಾಗಿದ್ದರೆ ಗುಣಹೀ ನನೂ, ರೂಪಹೀನನೂ ಆದ ನನ್ನ ತಮ್ಮನಿಗೆ ಮದುವೆಮಾಡಿದಲ್ಲದೆ ಸಾಧ್ಯವಿಲ್ಲ. ಇವಳ ಸುಖಕ್ಕೆ ಅಡ್ಡಬರದಿದ್ದರೆ ನನ್ನ ಹೆಸರು ಮಂಜುಳೆಯಲ್ಲ' ಎಂದು ಮನಸ್ಸಿನಲ್ಲಿ ತೀರ್ಮಾನಮಾಡಿಕೊಂಡು ಮಹಾರಾಜನಿಗೆ ಹೇಳಲು ಅವನು ಒಪ್ಪದಿದ್ದುದನ್ನು ಕಂಡು ಹತಾಶಳಾದಳು.

ಮಂಜುಳೆಯು ಮಾಡುತ್ತಿದ್ದ ಉಪಚಾರಗಳಿಗೆ ಮರುಳಾಗಿ ವೃದ್ಧಮಹಾರಾಜನು ಒಂದೊಂದುಸಲ ಅವಳು ಕುಣಿಸಿದಂತೆಲ್ಲಾ ಕುಣಿಯುವನು. ಅರಸನು ತನ್ನ ವಶ ವಾದ ಕಾಲದಲ್ಲಿ ಮೆಲ್ಲನೆ ಉಪದೇಶಮಾಡತೊಡಗುವಳು. 'ಪ್ರೌಢವಯಸ್ಕಳಾದ ಕುಮಾರಿಯನ್ನು ತಾವು ಪದೇಪದೇ ನೋಡಲು ಹೋಗುವುದು ಜನನಿಂದೆಗೆ ಆಸ್ಪದ ವಾಗುವುದಾದ್ದರಿಂದ ತಾವೀರೀತಿ ಮಾಡುವುದು ಉಚಿತವಲ್ಲ. ವೃದ್ಧನಾದರೂ ವಿಷ ಯಚಾಪಲ್ಯದಿಂದ ಪುನಃ ವಿವಾಹವಾಗಿರುವನೆಂದು ಪ್ರಜೆಗಳೆಲ್ಲರೂ ಆಗಲೇ ದೂರು ತ್ತಿರುವರು. ಅದನ್ನು ಕೇಳಿ ಕೇಳಿ ನನ್ನ ಕಿವಿಯು ಕಿವುಡಾಗಿದೆ. ನಿಮ್ಮ ಇಷ್ಟಬಂ ದಂತೆ ಮಾಡಬಹುದು. ಏನೋ ಕಿವಿಗೆ ಬಿದ್ದುದನ್ನು ಹೇಳಿದೆ' ಎನ್ನುವಳು

ನಮ್ಮ ಹಿಂದೂ ಸಂಸಾರದಲ್ಲಿ ಇಂತಹ ವೃದ್ಧವಿವಾಹಗಳಿಗೇನೂ ದರಿದ್ರವಿಲ್ಲ. ಪತ್ನಿಯು ಮರಣವಾದಕೂಡಲೇ ಎಷ್ಟುಜನ ಮಕ್ಕಳಿದ್ದರೂ ಅವರ ಕ್ಷೇಮಲಾಭವನ್ನು ಲಕ್ಷಿಸದೆ, ತಮ್ಮ ಸುಖವೇ ಹೆಚ್ಚೆಂದು ಭಾವಿಸಿ ವಯಸ್ಸನ್ನೂ, ದೇಹಾರೋಗ್ಯವನ್ನೂ ಲಕ್ಷಿಸದೆ ವಿವಾಹವಾಗಿ ಅವರು ಕುಣಿಸಿದಂತೆಲ್ಲಾ ಕುಣಿಯುವ ಸೂತ್ರದ ಬೊಂಬೆ ಯಾಗಿರುವ ಎಷ್ಟೋಜನ ವೃದ್ಧರನ್ನೂ ಈ ದಿನವೂ ಕೂಡ ನಾವು ಎಷ್ಟೋ ಕಡೆಗಳಲ್ಲಿ ನೋಡಬಹುದು ಈ ವೃದ್ಧಯುವಕರು ಕ್ಷಣಭಂಗುರವಾದ ತಮ್ಮ ದೇಹಸುಖವೇ ಹೆಚ್ಚೆಂದು ಭಾವಿಸುವರೇ ವಿನಹ ತಾವು ವಿವಾಹವಾದ ಕನ್ಯೆಯ ಗತಿಯು ಮುಂದೇ ನಾಗುವುದೆಂದಾಗಲಿ, ತನ್ನ ಮಕ್ಕಳ ಗತಿಯನ್ನಾಗಲಿ ಸ್ವಲ್ಪವೂ ಯೋಚಿಸುವುದಿಲ್ಲ. ರಾಜಾಅಮರಸಿಂಹನಂತ ಐಶ್ವರ್ಯವಂತನಿಗೆ ಇಂತಹ ವಿವಾಹದಿಂದ ಕಿಂಚಿತ್ತು (ಸುಖ

ಕ್ಕೆ ಬದಲು ದುಃಖವೇ ಹೆಚ್ಚು) ಸುಖ ದೊರೆಯಬಹುದಾದರೂ ದರಿದ್ರರಾದವರ ಪಾಡನ್ನು ಇಲ್ಲಿ ವಿವರಿಸಬೇಕಾದುದೇ ಇಲ್ಲ

ಕ್ರಮೇಣ ಚಿಕ್ಕಮ್ಮನ ಕುತಂತ್ರಗಳು ರಾಜಪುತ್ರಿಗೂ ತಿಳಿದವು. ಅವಳ ಕಪಟ ಬುದ್ಧಿಯನ್ನೂ, ಅವಳು ತನಗೆ ನಾನಾ ರೀತಿಯಾಗಿ ಬೋಧಿಸಲು ಬರುವ ಕಾರಣ ವನ್ನೂ ಅರಿತಳು ಅನೇಕವೇಳೆ "ಕುಮಾರೀ, ಇಷ್ಟು ವಯಸ್ಸಾಗಿಯೂ ವಿವಾಹ ವಿಲ್ಲದೆ ಇರುವುದು ಯುಕ್ತವಲ್ಲ ನಿನ್ನ ತಂದೆಗೆ ಹೇಳಿ ವಿವಾಹ ಮಾಡುವಂತೆ ಹೇಳು ವೆನು" ಎನ್ನುವಳು. ಸಂಗೀತಾಭ್ಯಾಸ, ವಿದ್ಯಾಭ್ಯಾಸವೇ ಮೊದಲಾದವುಗಳು ಕೂಡ ದೆಂದು ತಡೆಯುವಳು.

ಮಂಜುಳೆಯು ಇಷ್ಟೆಲ್ಲಾ ತಡೆಮಾಡಿದರೂ ರಾಜಕುಮಾರಿಗೆ ಅವಳಲ್ಲೆಳ್ಳಷ್ಟೂ ಕೋಪವಿಲ್ಲ. ವಿವೇಕ ಶೂನ್ಯಳಾಗಿ ಹೀಗೆಲ್ಲಾ ಮಾಡುವಳೆಂದು ಪರಿತಾಪಗೊಳ್ಳು ವಳು. ಅವಳು ತನಗಾಜ್ಞಾಪಿಸುವ ಕಾರ್ಯಗಳನ್ನೆಲ್ಲಾ ಶ್ರದ್ಧೆಯಿಂದ ಮಾಡುವಳು. ಇದರಿಂದಲಾದರೂ ಮಂಜುಳೆಯ ಮನವು ತೃಪ್ತಿಯಾಗುವುದೇ ? ರಾಜಕುಮಾರಿಯ ಸಹನ ಗುಣವನ್ನು ಕಂಡು ಅಸೂಯೆ ಪಡುವಳು.

ಈ ರೀತಿಯಾದ ದೃಶ್ಯವು ನಮ್ಮ ದಿನನಾಟಕಗಳಲ್ಲೆಷ್ಟನ್ನೋ ನಾವು ಕಾಣ ಬಹುದು. ವಿಷಯಾಸಕ್ತರಾದ ವೃದ್ಧರು ಪುನರ್ವಿವಾಹವಾಗುವುದೂ, ಇದರಿಂದ ಸಪತ್ನೀ, ಸಪುತ್ರೀ ಮಾತ್ಸರ್ಯವು ಹೆಚ್ಚಾಗಿ ತಾಸಿದರ ಕಾರಣವನ್ನು ಅರಿತಿದ್ದರೂ ಪತ್ನಿಯ ಕಡೆಗೂ ಮಾತನಾಡಲಾರದೆ ಪುತ್ರಿಯ ಕಡೆಗೂ ಮಾತನಾಡಲಾರದೆ ಧರ್ಮ ಸಂಕಟದಲ್ಲಿ ಸಿಕ್ಕಿಬಿದ್ದು ಒದ್ದಾಡುವ ವ್ಯಕ್ತಿಗಳೆಷ್ಟನ್ನೋ ನಾವೀಗಲೂ ನೋಡ ಬಹುದು. ಅವುಗಳಲ್ಲಿ ಮೇಲ್ಕಂಡವರೂ ಒಬ್ಬರು.

ಅನೇಕ ವೇಳೆಗಳಲ್ಲಿ ಮಂಜುಳೆಯು ಚಾತುರ್ಯವಾಗಿ ತಮ್ಮನಾದ ಮಾನಸಿಂಹನ ಮನೋಭಾವವನ್ನರಿಯಲೆತ್ನಿಸುವಳು ಬುದ್ಧಿ ಶೂನ್ಯನಾದ ಮಾನಸಿಂಹನು ಬಾಯಿಗೆ ಬಂದಂತೆಲ್ಲಾ ಹರಟುವುದನ್ನು ಕಂಡ ಪದ್ಮಲತೆಯು ರಾಜಪುತ್ರಿಯಿರುವ ಮಂದಿರಕ್ಕ ವನು ಬರಕೂಡದೆಂದು ತಡೆಯುವಳು. ಇದನ್ನು ಕೇಳಿದ ಮಾನಸಿಂಹನು ಸಿಟ್ಟಿನಿಂದ "ನಾಳೆಯಿಂದ ನನ್ನಧಿಕಾರಕ್ಕೊಳಗಾಗಿ ಗುಲಾಮಳಂತಿರಬೇಕಾದವಳು. ನಾನೀಗ ಅಲ್ಲಿಗೆ ಹೋಗುವುದನ್ನು ತಡೆಯುವುದಕ್ಕಧಿಕಾರವಾರಿಗಿದೆ ? ಮತ್ತೊಂದುಸಲ ನೀನು ಹೀಗೆ ಹೇಳಿದೆಯಾದರೆ ನಿನ್ನನ್ನು ಶಿಕ್ಷಿಸುವೆನು" ಎಂದು ಘರ್ಜಿಸುವನು.

ಪದ್ಮಲತೆಯೂ ಸಿಟ್ಟಿನಿಂದ "ಅಲ್ಪನೇ, ಈ ಸ್ಥಳವನ್ನು ಬಿಟ್ಟೋಡು ಹೆಚ್ಚು ಮಾತನಾಡಿದೆಯಾದರೆ ಅದಕ್ಕೆ ತಕ್ಕ ಫಲವನ್ನು ಹೊಂದುವೆ" ಎಂದಳು.

ಮಾನಸಿಂಹನು ಭೀತಿಯಿಂದ ತನ್ನ ಅಕ್ಕನ ಬಳಿಗೋಡಿಹೋಗಿ ನಡೆದ ವಿಷಯವನ್ನು ತಿಳಿಸಿದನು. ಕೋಪಾಗ್ನಿಯಿಂದ ತಪ್ತಳಾದವಳು ಈ ರೀತಿ ಚಿಂತಿಸಲಾರಂಭಿಸಿದಳು:-"ಮಹಾರಾಜನ ಬಳಿ ವಿವಾಹದ ವಿಷಯವಾಗಿ ಪ್ರಸ್ತಾಪಿಸಿದರೆ ಕಿವಿಗೆ ಹಾಕಿಕೊಳ್ಳಲಿಲ್ಲ. ಸುಖಲತೆಯೂ ಸ್ವಲ್ಪದರಲ್ಲಿ ಜಗ್ಗತಕ್ಕವಳಲ್ಲ. ಮುಂದೆ ಈ ರಾಜ್ಯವು ಸುಖಲತೆಯ ಪುತ್ರನಿಗಲ್ಲವೇ ಲಭಿಸುವುದು? ಹೀನಜಾತಿಯವಳಾದ ನನಗೆ ಯಾವ ಭಾಗವೂ ಸಲ್ಲದು. ಆದುದರಿಂದ ಸುಖಲತೆಯನ್ನು ಮಾನಸಿಂಹನಿಗೆ ಮದುವೆಮಾಡಿದರೆ ನನ್ನಿಷ್ಟವು ಪೂರ್ತಿಯಾಗುವುದು ಮಹಾರಾಜನಿಗೆ ಮಗಳಲ್ಲಿ ಬಹಳ ವಾತ್ಸಲ್ಯವಿರುವುದು. ಸೌಂದರ್ಯವತಿಯಾದವಳಿಗೆ ವರನು ದೊರಕುವುದು ಕಷ್ಟವಲ್ಲ. ನಾನೇನುಮಾಡಲಿ? ಮೃದುವಚನಗಳಿಂದವಳನ್ನು ವಶಪಡಿಸಿಕೊಳ್ಳಬೇಕು" ಮೇಲೆ ಹೇಳಿದಂತೆ ಚಿಂತಿಸಿದವಳಾಗಿ ಪುತ್ರಿಯ ಗೃಹಕ್ಕೆ ಹೋಗಿ ತನ್ನಿಂದಾದ ಸ್ತ್ರೀಧರ್ಮಗಳನ್ನೆಲ್ಲಾ ಬೋಧಿಸಿ ಮಾನಸಿಂಹನನ್ನು ವಿವಾಹನಾಗುವಂತೆ ಬಲಾತ್ಕರಿಸಿದಳು. ಶಾಂತಚಿತ್ತಳಾಗಿ ಕೇಳುತಿದ್ದ ರಮಣಿಯು "ತಾಯಿ, ದಯವಿಟ್ಟು ಈ ಮಾತನ್ನಿಷ್ಟಕ್ಕೇ ನಿಲ್ಲಿಸಿ. ಪ್ರಪಂಚ ಸಂಬಂಧದಿಂದ ದುಃಖವುಂಟಾಗುವುದು ಆತ್ಮ ಸಂಬಂಧವಾದ ಕಾರ್ಯಗಳನ್ನಾಚರಿಸುವುದರಲ್ಲಿಯೇ ನನ್ನ ಮನಸ್ಸಿಗೆ ಸುಖ ಪ್ರಪಂಚ ಸುಖವು ಕ್ಷಣೈಕವಾದದು. ನಾನಪೇಕ್ಷಿಸುವುದೆಲ್ಲಾ ಶಾಶ್ವತ ಸುಖವು ವಿವಾಹ ಪ್ರಸ್ತಾಪವನ್ನಿನ್ನು ಮಾಡಬೇಡಿ" ಎಂದಳು. ಮಂಜುಳೆಯು ಕೋಪಗೊಂಡು- "ಏನೆಂದೆ? ನನಗೆ ವೇದಾಂತ ಕಲಿಸುತ್ತೀಯಾ? ಛೀ! ಅಲ್ಪವೇ? ನಿನ್ನನ್ನು ಲಕ್ಷ್ಯ ಮಾಡಿ ಇಷ್ಟುದೂರ ಮಾತನಾಡಿದ್ದು ನನ್ನ ತಪ್ಪು, ಇರಲಿ" ಎಂದು ಹೇಳಿ ಕೋಪಗೊಂಡ ಸರ್ಪದಂತೆ ಬುಸುಗುಟ್ಟುತ್ತ ಎದ್ದು ಮಹಾರಾಜನ ಬಳಿಗೆ ಹೋಗಿ, "ಮಹಾರಾಜ ನಿಮ್ಮ ಪುತ್ರಿಗೆ ಹುಚ್ಚು ಹಿಡಿದಿರುವುದು. ಇಷ್ಟರಲ್ಲೇ ಮನೆಬಾಗಿಲುಗಳನ್ನು ಬಿಟ್ಟೋಡುವಳು. ಅವಳನ್ನು ನೋಡುವುದಕ್ಕೇ ನನಗೆ ಭಯವಾಗುತ್ತಿರುವುದು. ಅವಳಿಗೆ ಜಾಗ್ರತೆ ವಿವಾಹ ಮಾಡಿದರೆ ಸರಿ. ಇಲ್ಲದಿದ್ದರೆ ನಾನು ಪ್ರಾಣತ್ಯಾಗಮಾಡುತ್ತೇನೆ" ಎಂದು ಕಣ್ಣೀರು ಸುರಿಸಿ ಆ ವೃದ್ಧರಾಜನ ಮನಸ್ಸನ್ನು ಕರಗಿಸಿ ಚದರಿಸಿದಳು.

ಮೊದಲೇ ವೃದ್ಧ! ಅದರಮೇಲೆ ದ್ವಿತೀಯ ಪತ್ನಿಯ ವ್ಯಾಮೋಹ! ಕೇಳಬೇಕೆ? ಉನ್ಮತ್ತವಾದುದೊಂದು ವಾನರವು ಭೂತದಿಂದಾಕ್ರಮಿಸಲ್ಪಟ್ಟಿದ್ದಾಗ ಸುರಾಪಾನ ಮಾಡಿದ ಮೇಲೆ ಚೇಳು ಕಡಿದರೆ, ಆ ಮರ್ಕಟನ ಸ್ಥಿತಿಯೆಂತಿರುವುದೋ ಪತ್ನಿಯ

ಬೂಟಾಟಿಕೆಯ ಕಣ್ಣೀರಿನ ಪ್ರವಾಹವನ್ನು ನೋಡಿದ ವೃದ್ಧ ಮಹಾರಾಜನ ಸ್ಥಿತಿಯೂ ಹಾಗಾಯಿತು. ಪತ್ನಿಯನ್ನು ಸಂತೈಸಿ ಕುಮಾರಿಯನ್ನು ಕಾಣಲು ಅವಳ ಗೃಹಕ್ಕೆ ಹೋದನು. ಪಿತನಾಗಮನವನ್ನೀಕ್ಷಿಸಿದ ಪುತ್ರಿಯು ಭಕ್ತಿಯಿಂದ ನಮಸ್ಕರಿಸಲು ಮಹಾರಾಜನವಳನ್ನಾಶೀರ್ವದಿಸಿ ಕೆಲವುಪ್ರಶ್ನೆಗಳನ್ನು ಕೇಳಿದನು. ಕುಮಾರಿಯು ಅವುಗಳಿಗೆಲ್ಲಾ ಸರಿಯಾದುತ್ತರ ಕೊಡಲು ತನ್ನ ಪತ್ನಿಯ ಕೃತ್ರಿಮವನ್ನರಿತ ಮಹಾರಾಜನು ಮಗಳನ್ನು ನೋಡಿ, "ವತ್ಸೇ! ನೀನು ನಿನ್ನ ಜೀವಗೆಳತಿಯಾದ ಪದ್ಮಲತೆಯೊಡನೆ ಜ್ಯೋತಿಪುರದಲ್ಲಿರುವ ನಿನ್ನ ತಾಯಿಯ ಅರಮನೆಯಲ್ಲಿ ವಾಸಮಾಡು. ಅದು ನಿನಗೆ ತಕ್ಕ ಸ್ಥಳವು" ಎನಲು ವಿವೇಕ ಚೂಡಾಮಣಿಯಾದ ಸುಖಲತೆಯು "ತಂದೆಯೇ, ತಮ್ಮಾಜ್ಞೆಯಂತೆ ಪದ್ಮಲತೆಯೊಡನೆ ನಾನು ಜ್ಯೋತಿಪುರದಲ್ಲಿ ಅತ್ಯಾನಂದದಿಂದ ಕಾಲಕಳೆಯುವೆನು" ಎಂದಳು. ರಾಜಾ ಅಮರಸಿಂಹನು ' ಸರಸ್ವತೀಸದನ"ವೆಂದಭಿದಾನ ಹೊಂದಿದ ಜ್ಯೋತಿಪುರದರಮನೆಗೆ ತಕ್ಕ ಪರಿಜನರೊಡನೆ ಮಾರನೆಯ ದಿನವೇ ಕಳುಹಿಸಿದನು.

ತಂದೆಯ ಈ ವಿಧವಾದ ಏರ್ಪಾಡಿನಿಂದಾನಂದ ಹೊಂದಿದ ಸುಖಲತೆಯು ಪದ್ಮಲತೆಯೊಡನೆ ಇರಲಾರಂಭಿಸಿದಳು

——— . ೦ . ———

## ಮೂರನೆಯ ಅಧ್ಯಾಯವು.

### ವಿನೋದಲಹರೀ




ರ್ವಮಂಗಳೆಯಾದ ಸರ್ವೇಶ್ವರಿಯನ್ನು ಧ್ಯಾನಿಸಿದರೆ ಸಕಲ ಕಷ್ಟಗಳೂ ನಿವೃತ್ತಿಯಾಗುವವು ಚಿಂತೆಯನ್ನು ಬಿಡು ಅಂಬಿಕೆಯನ್ನು ಸ್ತುತಿಸೋಣ. ಪ್ರತಿನಿತ್ಯವೂ ಪಾರ್ವತೀದೇವಿಯನ್ನು ಪೂಜಿಸು. ಈ ಅಲ್ಪಮತಿಗಳ ಇಚ್ಛೆ ಎಂದೂ ನೆರವೇರದು. ಸುಖಲತಾ, ನಿನಗೆಂದೂ ಕಷ್ಟವುಂಟಾಗದು. ಮಾತೆಯಾದ ಸರ್ವೇಶ್ವರಿಯು ನಮ್ಮ ರಕ್ಷಣೆಯ ಭಾರವನ್ನು ವಹಿಸಿರುವಾಗ ನಾವೇಕೆ ಚಿಂತಿಸಬೇಕು. ನಿನ್ನ ತಂದೆಯ ಮನಸ್ಸು ವಿಕಲ್ಪಹೊಂದಿರುವುದು. ನಿರಕ್ಷರಕುಕ್ಷಿಯಾದ ಮಾನಸಿಂಹನನ್ನು ನಾನು ಸುಮ್ಮನೆ ಬಿಟ್ಟೇನೇ! ಅವನನ್ನು ನಿನ್ನ ದಾಸಾನುದಾಸನನ್ನಾಗಿ ಮಾಡದಿದ್ದಲ್ಲಿ ನನ್ನ ಹೆಸರು ಪದ್ಮ

ಲತೆಯಲ್ಲ. ಅವನಿಗೆ ತಕ್ಕ ಪತ್ನಿ ನೀನೇನು?-ಎಂದು ಪದ್ಮಲತೆಯು ಹೇಳಲು, ಸುಖ ಲತೆಯು ಮನಸ್ಸಿಗೆ ಸಮಾಧಾನ ತಂದುಕೊಂಡು ಪದ್ಮಲತೆಯು ಹೇಳಿದಂತೆ ಪ್ರತಿದಿನವೂ ನಿರ್ಮಲಚಿತ್ತದಿಂದ ಈಶ್ವರಧ್ಯಾನ ಮಾಡುತ್ತಾ ಕಾಲಕಳೆಯುತಿದ್ದಳು. ಚತುರೆಯಾದ ಪದ್ಮಲತೆಯು ತನ್ನ ಹಾಸ್ಯ ಸಂಭಾಷಣೆಯಿಂದ ರಾಜಕುಮಾರಿಯ ಮನಸ್ಸಿಗಾನಂದವುಂಟುಮಾಡುತಿದ್ದಳು. ಮಹಾರಾಜನೂ, ಮಂಜುಳೆಯೂ ಜ್ಯೋತಿಪುರಕ್ಕೆ ಬಂದಿದ್ದಾಗ ಮಾನಸಿಂಹನನ್ನು ಸುಖಲತೆಯ ಮನೆಯಲ್ಲಿಯೇ ಇರುವಂತೆ ಹೇಳಿಹೋದಪ್ರಕಾರ ಅವನು ರಾಜಕುಮಾರಿಯ ಜತೆಯಲ್ಲಿಯೇ ಇರುತ್ತಿದ್ದನು. ಇದರಿಂದ ಪದ್ಮಲತೆಗೆ ಅವನನ್ನು ಹಾಸ್ಯಮಾಡಲು ಸಾಕಾದಷ್ಟು ಸಮಯ ದೊರೆಯಿತು.

ಪದ್ಮಲತೆಯು ವಿನೋದಾರ್ಥವಾಗಿ ಮಾನಸಿಂಹನನ್ನು ರಾಜಕುಮಾರಿಯ ಸಮುಖದಲ್ಲಿ ನಿಲ್ಲಿಸುವಳು ರಾಜಕುಮಾರಿಯು ನಕ್ಕು-'ಪದ್ಮಾ. ಈ ಮಹಾಪುರುಷನ ವಾಸಸ್ಥಾನವಾವುದು? ಆಹಾ! ಜಗಜ್ಯೋತಿಯಾದ ಎಂತಹ ಸೌಂದರ್ಯ!'' ಎಂದು ಕೇಳುವಳು. ಇದನ್ನು ಕೇಳಿದಕೂಡಲೇ ಮಾನಸಿಂಹನು ತನಗಿರುವ ಮುವ್ವತ್ತೆರಡು ಹಲ್ಲುಗಳನ್ನೂ ತೋರಿಸುತ್ತ, ರಾಜಕುಮಾರಿಯು ತನ್ನಲ್ಲನುರಕ್ತಳಾಗಿರುವಳೆಂದು ಹಿಗ್ಗುತ್ತಾ, ತಾನವಳನ್ನು ವಿವಾಹವಾದಂತೆ ಕನಸುಕಂಡಾನಂದಿಸುವನು ಪದ್ಮಲತೆಯು ಇವನನ್ನಿಷ್ಟಕ್ಕೇ ಬಿಡುವಳೇ ?

ರಾಜಕುಮಾರಾ, ಏನುಮಾಡೋಣ ಹೇಳು, ನನ್ನರಸಿಯು ನಿನ್ನನ್ನು ಪರೀಕ್ಷಿಸಬೇಕೆನ್ನುವಳು ನಿನಗೋ ಅಕ್ಷರವೆನ್ನುವುದು ಏನೆಂಬುದೇ ಗೊತ್ತಿಲ್ಲ. ಹೋದರೆ ಹೋಗಲಿ ಬಿಡು; ಅವರು ಪಂಡಿತರು. ನೀನು ಪರೀಕ್ಷಿಸಿದರ ಅಗೌರವವಾಗಿ ತಿಳಿದುಕೊಂಡಾರು! ಎಂದು ನಾನೆಷ್ಟು ಹೇಳಿದರೂ ಕೇಳುವಹಾಗಿಲ್ಲ ನಾಳೆಯಿಂದ ನನ್ನ ಹತ್ತಿರ ಪಾಠಹೇಳಿಸಿಕೊಳ್ಳುತ್ತೀಯಾ ? ನಿನ್ನಂತಹ ಬುದ್ಧಿವಂತರಿಗೆ ಇದೇನೂ ಕಷ್ಟವಲ್ಲ. ನನ್ನನ್ನು ಮಾತ್ರ ಮರೆಯಬೇಡ, ಸುಖಲತೆಯು ನಿನ್ನನ್ನೇ ಮದುವೆಯಾಗುವಳು. ನಿನಗಿದು ಸಮ್ಮತವಷ್ಟೆ?-ಎನ್ನುವಳು

ಅದಕ್ಕಾ ಮೂಢಶಿಖಾಮಣಿಯು—ಪದ್ಮಾ, ನೀನೇನು ಹೇಳಿದರೂ ಹಾಗೆ ಕೇಳುತ್ತೇನೆ. ನಿನಗೆ ಬೇಕಾದಷ್ಟು ಹಣ ಕೊಡುತ್ತೇನೆ. ನಿನಗೆ ನಿತ್ಯ ಸಾವಿರ ನಮಸ್ಕಾರ ಹಾಕುತ್ತೇನೆ. ನನ್ನನ್ನು ರಾಜಪುತ್ರಿಯು ಮದುವೆಯಾದರೆ ಅಷ್ಟೇಸಾಕು. ರಾಜ್ಯವು ಮಾತ್ರ ಇತರರ ವಶವಾಗಕೂಡದು ನೋಡು-ಎನ್ನುವನು.

ಅಂದಿಂದ ಪದ್ಮಲತೆಯು ಮಾನಸಿಂಹನಿಗೆ 'ಅ ಆ ಇ ಈ ಉ ಊ' ಮೊದಲಾದಕ್ಷರಗಳನ್ನು ಕಲಿಸಲಾರಂಭಿಸಿದಳು. ಅವನ ಮೆದುಳಿನಲ್ಲಿ ಆ ಅಕ್ಷರಗಳು ಪ್ರವೇಶಿಸಲಾರದೇ ಹೋದುವು ಬಾಯಿಗೆ ಬಂದಂತೆಲ್ಲಾ ಬಗಳುವನು. ಉನ್ಮತ್ತನಂತೆ ಪದ್ಮಲತೆಯನ್ನು ನೋಡುತ್ತಾ ನಿಲ್ಲುವನು

ವಿನೋದ ಪ್ರಿಯಳಾವ ಪದ್ಮಲತೆಗೆ ಮಾನಸಿಂಹನೊಂದು ಕ್ರೀಡಾವಸ್ತುವಾದನು. ಎರಡು ಮೂರು ದಿನಗಳು ಕಳೆದನಂತರ 'ಮಾನಸಿಂಹ, ನೀನು ಸಕಲ ವಿದ್ಯಾಪಾರಂಗತನಾಗಿರುವೆ ನಡೆ. ರಾಜಕುಮಾರಿಯ ಬಳಿಗೆ ಹೋಗಿ ಪರೀಕ್ಷೆ ಕೊಟ್ಟು ಬರೋಣ" ವೆಂದು ಹೇಳಿ ಈ ಮೂಢಶಿಖಾಮಣಿಯನ್ನು ರಾಜಕುಮಾರಿಯ ಬಳಿಗೆ ಕರೆದುಕೊಂಡು ಹೋದಳು.

ಮೂಢನು ಆನಂದದಿಂದ ಉನ್ಮತ್ತ ನಾಟ್ಯವಾಡುತ್ತ ರಾಜಕುಮಾರಿಯ ಎದುರಿನಲ್ಲಿ ನಿಂತನು. "ಸುಖಲತಾ, ಇವನನ್ನೀಗ ಪರೀಕ್ಷಿಸು. ಪಂಡಿತನೆಂಬ ಬಿರುದನ್ನು ಕೊಡದೆ ಅವನನ್ನು ಹಿಂದಕ್ಕೆ ಕಳುಹಿಸಲಾರೆ" ಎಂದು ಪದ್ಮಲತೆಯು ಹೇಳಲು ಅದಕ್ಕೆ ಸುಖಲತೆಯು "ರಾಜಕುಮಾರ, ಅರವತ್ತೇಳೂ ಮೂರು ಸೇರಿದರೆ ಎಷ್ಟಾಗುತ್ತದೆ?" ಎನಲು, ಮಾನಸಿಂಹನು ಗಂಭೀರದಿಂದ 'ಮೂವತ್ತು' ಎಂದು ಉತ್ತರ ಕೊಟ್ಟನು

ಸುಖಲತೆಯು ಪುನಃ — ಹತ್ತೊಂಭತ್ತಾದ ನಂತರ ಯಾವ ಸಂಖ್ಯೆ' ಎಂದು ಕೇಳಲು, 'ತೊಂಭತ್ತೈದು' ಎಂದು ಉತ್ತರವು ದೊರಯಿತು 'ಆ' ಎನ್ನುವ ಅಕ್ಷರವಾದ ನಂತರ ಯಾವ ಅಕ್ಷರವೆಂದು ಕೇಳಲು, 'ಟೋ' ಎಂದು ಹೇಳಿದನು. 'ನೀನು ರಾಜಪುತ್ರನಲ್ಲವೇ? ಹಿಂದೂ ದೇಶದ ಪೂರ್ವ ಚರಿತ್ರೆಯನ್ನು ನೀನು ಚನ್ನಾಗಿ ಬಲ್ಲೆಯಷ್ಟೆ? ಭೀಮಸೇನನಿಗೂ, ದಾಶರಥಿಗೂ ಸಂಬಂಧವೇನು?' ಎಂದು ಕೇಳಲು, ಪಂಡಿತನು ಉತ್ತರ ಕೊಡಲಾರದೆ ತಲೆಯನ್ನು ಕೆರೆಯುತ್ತ ಆಕಳಿಸುತ್ತ ನಿಲ್ಲಲು, ಪದ್ಮಲತೆಯು 'ಸುಖಲತಾ, ದೇವರಹಸ್ಯವನ್ನರಿವರು ಸಂಕೇತದಿಂದ ಹೇಳುವರು, ಬಾಯ್ಬಿಟ್ಟು ಹೇಳಲಾರರು' ಎಂದಳು

**ಸುಖಲತೆ**-ನಾನು ಕೇಳಿದ ಪ್ರಶ್ನೆಗೆ ಉತ್ತರವೇ ಇಲ್ಲ ಅದಿರಲಿ, ಇವರ ಶಿರೋಕೇಶಗಳೆಲ್ಲವೂ ಏನಾದವು?

**ಪದ್ಮಲತೆ**-ರಾಜಕುಮಾರಿ, ಇದೊಂದು ವಿಧವಾದ ಶೃಂಗಾರ

**ಸುಖಲತೆ**-ಮುಖದಲ್ಲಿ ದೊಡ್ಡಕ್ಕನು ನಾಟ್ಯವಾಡುತ್ತಿರುವಳದೇಕೆ?

**ಪದ್ಮಲತೆ**-ರಾಜಕುಮಾರರಲ್ಲೀತನೇ ಸೌಂದರ್ಯ ಶಿಖಾಮಣಿಯೆನ್ನುವುದನ್ನು ನಿರೂಪಿಸುವುದಕ್ಕೆ.

**ಸುಖಲತೆ**-ಕರ್ಣಗಳೆರಡೂ ಭೂವ್ಯಾಕಾಶಗಳನ್ನು ಮುಟ್ಟುತ್ತಿರುವವು ?

**ಪದ್ಮಲತೆ**-ರಾಜ್ಯವನ್ನಾಳುವುದಕ್ಕೆ.

**ಸುಖಲತೆ**-ಕಣ್ಣುಗಳೇನಾದವು ?

**ಪದ್ಮಲತೆ**-ಅಂತರ್‌ಧ್ಯಾನದಲ್ಲಿ ಮಗ್ನವಾಗಿರುವವು.

**ಸುಖಲತೆ**-ನಾಸಿಕವೇನಾಯಿತು ?

**ಪದ್ಮಲತೆ**-ನುಗ್ಗೆಯ ಕಾಯಿಯಂತೆ ಬಲಿತು ಬಗ್ಗಿಹೋಗಿದೆ.

**ಸುಖಲತೆ**-ಆಹಾ ! ಎಂತಹ ಸೌಂದರ್ಯರಾಶಿ ?

**ಪದ್ಮಲತೆ**-ರಾಜಪುತ್ರೀ, ಇದಕ್ಕೇ ಅಲ್ಲವೇ ಪಂಡಿತರು ಪೈಶಾಚ ಸೌಂದರ್ಯವೆಂದು ವರ್ಣಿಸಿರುವರು!

**ಪದ್ಮಲತೆ**-ದಂತಗಳು ಎಷ್ಟೊಂದು ಬಣ್ಣದಿಂದ ಕೂಡಿ ಒಂದಕ್ಕೊಂದು ಸಂಬಂಧ ಪಡೆದಿರುವವು? ಅದೇಕೆ ?

**ಸುಖಲತೆ**-ಸೋದರೀ, ನೀಲ, ಪಚ್ಚೆ, ಕಪ್ಪು, ಕೆಂಪು ಈ ಬಣ್ಣಗಳ ಕ್ರಿಮಿಕೂಟಗಳು ಆ ರೀತಿ ಶೋಭಿಸುತ್ತಿರುವವು. ಗುಡ್ಡವನ್ನಲಂಕರಿಸಿರುವ ಕಲ್ಲುಗಳಂತೆ ಅವು ಒಂದರೊಡನೊಂದು ಸೇರದಿರುವುದರಲ್ಲಾಶ್ಚರ್ಯವೇನು ?

**ಸುಖಲತೆ**-ಅವನ ಗಡ್ಡವನ್ನೆಷ್ಟೋ ಹುಡುಕಿದೆ, ಕಾಣಿಸಲಿಲ್ಲ, ಏನಾಯಿತು ?

**ಪದ್ಮಲತೆ**-ಅದಿಲ್ಲದಿದ್ದರೆ ಸೌಂದರ್ಯಕ್ಕೇನೂ ಕುಂದಕ ಕಾಣಿಸುವುದಿಲ್ಲ. ಅದೆಲ್ಲೋ-

**ಸುಖಲತೆ**-ಒಂಟೆಯ ಕುತ್ತಿಗೆಯಂತೆ ಆ ಕಂಠವೆಷ್ಟು ರಮಣೀಯವಾಗಿರುವುದು, ನೋಡು.

**ಪದ್ಮಲತೆ**-ಇವೆಲ್ಲವೂ ಈಶ್ವರನ ವರಪ್ರಸಾದವೆಂದು ಹೇಳಬೇಕು. ಅವಯವಗಳ ಸೌಂದರ್ಯವೆಲ್ಲವೂ ಒಂದಕ್ಕೊಂದು ಸಂಬಂಧ ಪಡದಿರಲು ಎಷ್ಟು ಪುಣ್ಯ ಮಾಡಿರಬೇಕೋ?

**ಸುಖಲತೆ**-ಒಳ್ಳೆಯದಿರಲಿ. ಈ ದಿನ ಪರೀಕ್ಷಿಸಿದ್ದಿಷ್ಟೇ ಸಾಕು. ಬಹಳ ಬುದ್ಧಿವಂತನಾಗಿರುವನು. ಯುದ್ಧಕಾಲದಲ್ಲಿ ಧೈರ್ಯವಾಗಿ ಯುದ್ಧ ಮಾಡುವನೇ? ಕುದುರೆ ಏರುವುದು ಹೇಗೆಂದು ಕೇಳಿದೆಯೊ? ತಂತ್ರ, ಯುಕ್ತಿ, ಸಾಹಸ, ಚಾತುರ

ಗಳು ತಿಳಿಯುವವೇ? ಇವುಗಳು ಬಾರದಿದ್ದರೆ ನೀನಾದರೂ ಹೇಳಿಕೊಡು ಕುದುರೆಯ ಹಿಂಭಾಗದಲ್ಲಿ ಇವರ ಮುಖವಿರುವಂತೆಯೂ, ಯುದ್ಧದಲ್ಲಿ ಶತ್ರುಗಳನ್ನು ಕಂಡರೆ ಓಡಿಹೋಗಿ ಮರೆಯಾಗುವಂತೆಯೂ, ಸಾಧ್ಯವಾದರೆ ಹೊರಗಿನ ಪ್ರಪಂಚದ ವಿಷಯವನ್ನೇ ತಿಳಿಯದೆ ತಪಸ್ಸು ಮಾಡುವಂತೆಯೂ ಹೇಳಿಕೊಡು. ಪಾಪ! ಒಳ್ಳೇ ಬುದ್ಧಿವಂತನಾದ ಹುಡುಗ. ಹೇಳಿಕೊಡುವುದಕ್ಕೆ ಮೊದಲೇ ಕಲಿತುಕೊಳ್ಳುವನು ತಲೆಕೆಳಕಾಗಿ ನಮಸ್ಕಾರ ಮಾಡುವಂತೆ ಹೇಳು. ಈದಿನ ಅವನನ್ನು ಕರೆದುಕೊಂಡು ಹೋಗು.'' ಎಂದು ಹೇಳಿ ಮಾನಸಿಂಹನ ಕಡೆ ತಿರುಗಿ, 'ಮಾನಸಿಂಹಾ, ನೊನ್ನೆಯ ದಿನ ಬರುತ್ತೀಯಾ!'' ಎಂದು ಕೇಳಲು, ಮಾನಸಿಂಹನು ಬಾಯನ್ನು ಅಗಲವಾಗಿ ತೆರೆದು—''ನಾನಿಲ್ಲಿಯೇ ಇರುತ್ತೇನೆ. ನೀವುಗಳು ಏನು ಹೇಳಿಕೊಟ್ಟರೂ ಹೇಳಿಸಿಕೊಳ್ಳುತ್ತೇನೆ ನೀವು ಹೇಳಿದ ಕೆಲಸಗಳನ್ನೆಲ್ಲಾ ಮಾಡುತ್ತೇನೆ''. ಎಂದನು ಸುಖಲತೆಯು 'ನಿನ್ನ ಉಪಾಧ್ಯಾಯಿನಿಗೆ ಹತ್ತುಸಲ ನಮಸ್ಕಾರ ಮಾಡು' ಎನ್ನಲು ಆ ಮೂಢನು ಸ್ವಲ್ಪವೂ ಹಿಂದು ಮುಂದು ನೋಡದೆ ಪದ್ಮಲತೆಯ ಕಾಲುಗಳಿಗೆ ಬಿದ್ದು ಹತ್ತು ನಮಸ್ಕಾರ ಹಾಕಿದ್ದಲ್ಲದೆ ಸುಖಲತೆಗೂ ನಮಸ್ಕಾರ ಮಾಡಿದನು.

ಸುಖಲತೆಯು ನಕ್ಕು, '' ಪದ್ಮಾ, ಈ ನರನನ್ನು ಯಾವುದಕ್ಕೆ ಹೋಲಿಸಬಹುದು? ವಾನರಕ್ಕಾದರೂ ಚಟುವಟಿಕೆಯುಂಟು, ಈ ಪ್ರಾಣಿಗೆ ಅದೂ ಇಲ್ಲ ಪಾಪ! ದುಃಖದಿಂದ ಕೂಡಿದ ನನ್ನ ಕಾಲವನ್ನು ವಿನೋದವಾಗಿ ಕಳೆಯಲು ಈ ವಿನೋದ ಪ್ರಾಣಿಯನ್ನು ಸಾಕುತ್ತಲಿರುವೆ ಯಾರಿಂದಲೂ ಕಲಿಯಲಸಾಧ್ಯವಾದ ವಿದ್ಯೆಗಳನ್ನೆಲ್ಲಾ ಈ ರಾಜಪುತ್ರನಿಗೆ ಕಲಿಸು ಸಮಯದಲ್ಲಿ ಅದರಿಂದ ಬಹಳ ಪ್ರಯೋಜನವಾಗುವುದು '' ಎಂದಳು.

ಸುಖಲತೆಯು ತನ್ನ ವಿಷಯದಲ್ಲಿ ಹೇಳಿದ ಮಾತುಗಳನ್ನು ಕೇಳಿದ ಮಾನಸಿಂಹನ ಸಂತೋಷಕ್ಕೆ ಆದ್ಯಂತವಿಲ್ಲ ಪದ್ಮಲತೆಯು ಅವನನ್ನು ನೋಡಿ ' ನೀನು ಪರೀಕ್ಷೆ ಕೊಟ್ಟದ್ದು ಸಾಕು ಬಾ, ಹೋಗೋಣ ' ಎಂದು ಕರೆಯಲು ಆ ಮೂಢಶಿಖಾಮಣಿಯಾದ ರಾಜಪುತ್ರನು 'ನಾನಿಲ್ಲಿಯೇ ಇರುವೆನು. ಬೇಕಾದರೆ ನೀನು ಹೋಗು' ಎನಲು, 'ಬಾ, ನಿನಗೆ ಮುಂದಿನ ಪಾಠವನ್ನು ಹೇಳಿಕೊಡುತ್ತೇನೆ' ಎಂದು ಹೇಳಿ ಅವನನ್ನು ರಾಜಪುತ್ರಿಯು ಸಮ್ಮುಖದಿಂದ ಕರೆದುಕೊಂಡು ಹೋದಳು.



# ನಾಲ್ಕನೆಯ ಅಧ್ಯಾಯವು.

## ಸರ್ದಾರ್ ಸಿಂಹ.




ನೋರಂಜಿತವಾದ ವಾದ್ಯಘೋಷವು ಕೇಳುವವರ ಕಿವಿಗಾನಂದವನ್ನುಂಟುಮಾಡುತ್ತಿದ್ದಿತು ಉಲ್ಲಾಸವಾದ ಕೃತಿಗಳನ್ನು ಕೆಲವರು ಸುಸ್ವರದಲ್ಲಿ ಹಾಡುತ್ತಿದ್ದರು. ಒಂದೇ ತರದ ಉಡಿಗೆಗಳನ್ನು ಧರಿಸಿದ್ದ ಸೈನಿಕರ ಗುಂಪು ಎಲ್ಲಿ ನೋಡಿದರೂ ತುಂಬಿದ್ದಿತು. ಪ್ರಾತಃಕಾಲದ ಸೂರ್ಯನು ತನ್ನ ಕಿರಣಗಳನ್ನು ಕಳುಹಿಸಿ ಜನರನ್ನು ಎಚ್ಚರಗೊಳಿಸುವ ಮೊದಲೇ ಈ ಸೈನಿಕರೆಲ್ಲರೂ ಅಂದರೆ- ಕುದುರೆ, ಸವಾರರು, ಕಾಲಾಳುಗಳು, ಬಂಡಿಗಳು, ಕೂಲಿಯಾಳುಗಳು, ಬೇಟೆಯಾಡಲು ಬೇಕಾದ ಸಾಮಾನುಗಳನ್ನು ತರತಕ್ಕವರು, ಎಲ್ಲರೂ ಒಂದು ಮೈದಾನದಲ್ಲಿಳಿದರು ಕ್ಷಣಮಾತ್ರದಲ್ಲಾ ಮೈದಾನದಲ್ಲಿ ಎಲ್ಲೆಲ್ಲಿಯೂ ಗುಡಾರಗಳು ಹೊಡೆಯಲ್ಪಟ್ಟವು. ಮನುಷ್ಯರು ಇಳಿದುಕೊಳ್ಳುವುದಕ್ಕೆ ಬೇರೆ, ಅಶ್ವಶಾಲೆಗಳು, ಪಾಕಶಾಲೆಗಳು, ಸ್ನಾನಮಾಡಲು ಬೇರೆ, ಎಲ್ಲವೂ ನಿಮಿಷಮಾತ್ರದಲ್ಲಿ ಸಿದ್ಧವಾದವು ಈ ರೀತಿಯಾದ ಮನುಷ್ಯ ನಿರ್ಮಿತವಾದ ನಗರದಲ್ಲಿ ಕೆಲವರು ಗುಂಪಾಗಿ ಒಂದುಕಡೆ ಕುಳಿತು ನಸ್ಯ ತೀಡುತ್ತಲೂ, ನಾಸಿಕರಂಧ್ರದಲ್ಲೇರಿಸಿಯೂ, ಇತರರಿಗೆ ಕೊಟ್ಟೂ ಕಾಲಕಳೆಯುತ್ತಿದ್ದರು. ಮತ್ತೆ ಕೆಲವರು ಸೌದೆಗಳನ್ನು ಆರಿಸಿಯೂ, ಇತರರು ಕೂಡಿಸಿಟ್ಟದ್ದನ್ನು ಚೌರ್ಯಮಾಡಿಯೂ, ಬಾಯಲ್ಲಿ ಮಾತ್ರ ಸತ್ಯ ವಚನಗಳನ್ನಾಡುತ್ತ ಕೈಯಲ್ಲಿ ತಮ್ಮ ಕೆಲಸವನ್ನು ಮಾಡುತ್ತಲೂ ಕಾಲಕಳೆಯುತ್ತಿದ್ದರು ಸವಾರರು ತಮ್ಮ ತಮ್ಮ ಕುದುರೆಗಳ ಶ್ರಮವನ್ನು ಹೋಗಲಾಡಿಸುವ ಉದ್ದೇಶದಿಂದ ಅವುಗಳ ಮೈಯನ್ನುಜ್ಜಿಕೊಂಡೇ ಅವುಗಳನ್ನು ಹೊಗಳುತ್ತಲೂ, ದೂಷಿಸುತ್ತಲೂ ಆನಂದದಿಂದ ಕಾಲಕಳೆಯುತ್ತಿದ್ದರು ತಾವು ಧರಿಸಿದ್ದ ಉಡುಪುಗಳನ್ನು ಬಿಚ್ಚಿ 'ಉಸ್ಸಪ್ಪಾ' ಎಂದು ಮಲಗಿದವರೆಷ್ಟೋ ಜನ. ತಮ್ಮ ತಮ್ಮ ಶೌರ್ಯಪ್ರತಾಪಗಳನ್ನು ಹೇಳಿಹೇಳಿ ಕಾಲಕಳೆದ ಸೋಮಾರಿಗಳೆಷ್ಟೋ ಜನ. ಒಂದು ಘಂಟೆಯೊಳಗಾಗಿ ಆ ಮೈದಾನವನ್ನು ಕಸಕಡ್ಡಿಗಳಿಲ್ಲದೆ ರಮಣೀಯವಾದ ರಾಜಧಾನಿಯಂತೆ ಶೃಂಗರಿಸಿದರು. ಪ್ರತಿಯೊಬ್ಬ ಸೈನಿಕನ ಮುಖದಲ್ಲಿಯೂ ವೀರರಸವು ತುಂಬಿ ತುಳುಕುತ್ತಿದ್ದಿತು ಅನೇಕರು ಬಾಯಿಗೆ ಬಂದಂತೆ ಹಾಡುತ್ತಿದ್ದರು. ಹಚ್ಚಗಿರುವ ಹುಲ್ಲನ್ನು ಕಂಡ ಕೂಡಲೇ ಕುದುರೆಗಳು ಸ್ವೇಚ್ಛಾ ವಿಹಾರಿಗಳಾಗಿ ಮೇಯತೊಡಗಿದವು. ಆ ಮೈದಾನದ ಮಧ್ಯಭಾಗದಲ್ಲಿ ಭುವನೇಶ್ವರಿಯಂಥದೊಂದು ಸುಂದರ

ಸೌಧವು ನಿರ್ಮಿಸಲ್ಪಟ್ಟಿದ್ದಿತು. ಅದರ ಸೌಂದರ್ಯವನ್ನು ಅಷ್ಟಿಷ್ಟೆಂದು ವರ್ಣಿಸಲು ಸಾಧ್ಯವಿಲ್ಲ. ಕಟ್ಟಡದ ಮಧ್ಯಭಾಗದಲ್ಲೆಲ್ಲಾ ನಾನಾವಿಧವಾದ ಜರತಾರಿಯ ಮತ್ತು ಕಿಂಕಾಬಿನ ಕೆಲಸವು ಮಾಡಲ್ಪಟ್ಟಿದ್ದುದಲ್ಲದೆ ಮಧ್ಯಭಾಗದಲ್ಲಿ ನವರತ್ನಖಚಿತವಾದ ಸಿಂಹಾಸನವೂ, ಅದರ ಎರಡು ಪಾರ್ಶ್ವಗಳಲ್ಲಿಯೂ ಗೌರವರ್ಣವಾದ ಅನೇಕ ಆಸನಗಳೂ, ಮಧ್ಯೆ ಬೆಲೆಬಾಳತಕ್ಕ ರೇಷ್ಮೆವಸ್ತ್ರವೂ ಹಾಕಲ್ಪಟ್ಟಿತ್ತು. ಈ ಭುವನೇಶ್ವರಿಯಲ್ಲಿ ಅನೇಕ ಗೃಹಗಳಿದ್ದವು. ಶಯನಗೃಹವು ಹಂಸತೂಲಿಕಾ ತಲ್ಪದಿಂದಲೂ, ನಾನಾವಿಧವಾದ ಸುಂದರ ಚಿತ್ರಪಠಗಳಿಂದಲೂ ಕೂಡಿ ಶೋಭಿಸುತ್ತಿದ್ದಿತು. ಏಕಾಂತಗೃಹದಲ್ಲಿ ಅನೇಕ ಪುಸ್ತಕಗಳೂ, ಆಶ್ಚರ್ಯ ವಸ್ತುಗಳೂ ಇದ್ದವು ವಿನೋದದಿಂದ ಕಾಲಕಳೆಯಲು ಪ್ರತ್ಯೇಕ ಕೊಠಡಿಯಿದ್ದಿತು. ಇವುಗಳನ್ನೆಲ್ಲಾ ನೋಡಿದರೆ ಯಾರೋ ಒಬ್ಬ ಮಹಾರಾಜನ ಆಗಮನಾರ್ಥವಾಗಿ ಇಷ್ಟೊಂದು ಏರ್ಪಾಡು ಮಾಡಲ್ಪಟ್ಟಿರುವಂತೆ ಕಂಡು ಬರುತ್ತಿದ್ದಿತು ಸೈನಿಕರ ಜಯಧ್ವನಿಯಿಂದ ಮಹಾರಾಜನು ಬರುವನೆಂದು ತಿಳಿಯಿತು ಹದಿನಾರು ಕುದುರೆಗಳು ಕಟ್ಟಲ್ಪಟ್ಟಿದ್ದೊಂದು ದಿವ್ಯರಥದಲ್ಲಿ ತೇಜೋಮಯನಾದ ಯುವಾಪುರುಷನೊಬ್ಬನು ಮಂದಸ್ಮಿತವದನನಾಗಿ ಸಮೀಪದಲ್ಲಿ ಕುಳಿತಿದ್ದ ತನ್ನ ಆಪ್ತಮಿತ್ರನೊಡನೆ ಸಂಭಾಷಿಸುತ್ತಿದ್ದನು. ಮಿತ್ರನೂ ಸಂತೋಷದಿಂದ ಮಹಾರಾಜನ ಮಾತುಗಳಿಗೆ ತಕ್ಕ ಉತ್ತರವನ್ನು ಕೊಡುತ್ತಾ ವೀರರು ಮಾಡುವ ವಂದನೋಪಚಾರಗಳನ್ನು ಸ್ವೀಕರಿಸಿ ಪ್ರತಿ ವಂದನೆಯನ್ನು ಮಾಡುತ್ತಿದ್ದನು.

ಅರಸನು ಭುವನೇಶ್ವರಿಯ ಸಮೀಪಕ್ಕೆ ಬಂದ ಕೂಡಲೇ ದಾಸಪರಿಜನರೋಡಿ ಬಂದು ಅರಸನಿಗೆ ದೃಷ್ಟಿ ತೆಗೆದು ಆರತಿಯೆತ್ತಿ 'ಜಯವಿಜಯೀಭವ' ಎಂದು ಮಂಗಳಾಶೀರ್ವಚನವನ್ನು ಹೇಳಿ ಅರಮನೆಯೊಳಗೆ ಕರೆದುಕೊಂಡು ಹೋದರು. ಮಹಾರಾಜನು ವಿಶ್ರಾಂತಿಭವನದಕಡೆ ನಡೆಯಲು ಅವನ ಸಖನು ದರ್ಬಾರ್ ಮಂಟಪದಲ್ಲಿ ಕುಳಿತು ಸೈನಿಕರ ಯೋಗಕ್ಷೇಮಗಳನ್ನು ವಿಚಾರಿಸಿ ಅವರಿಗೆ ಬೇಕಾದ ವಸ್ತುಗಳನ್ನೂ ದ್ರವ್ಯವನ್ನೂ ಆಳುಗಳ ಮೂಲಕ ಕಳುಹಿಸಿಕೊಡುವಂತೆ ಹೇಳಿದನು. ಇಷ್ಟುಹೊತ್ತಿಗೆ ಭೋಜನವು ಸಿದ್ಧವಾಗಿರುವುದೆಂದು ತಿಳಿಸಲು ಸಖನು ಮಹಾರಾಜನಿರುವಕಡೆ ಹೋಗಿ ಭೋಜನಕ್ಕೆ ಬರುವಂತೆ ಕರೆಯಲು ಅವನು-ಮಿತ್ರಾ, ಸ್ನಾನಮಾಡಬೇಡವೇ? ಎಂದು ಕೇಳಲು ಸ್ನಾನಗೃಹದಲ್ಲಿ ಬಿಸಿನೀರು ಸಿದ್ಧವಾಗಿರುವುದೆಂದು ಹೇಳಿದನು.

ಪ್ರತಾಪಸಿಂಹ-ಸಮೀಪದಲ್ಲಿ ನದಿಯ ನಿರ್ಮಲೋದಕವು ಹರಿಯುತ್ತಿರುವುದು. ನೀನೂ ನಾನೂ ವಿನೋದವಾಗಿ ಈಜೋಣ, ಬಾ.

ಪ್ರತಾಪಸಿಂಹ-ಮಹಾರಾಜ, ಈಗ ದಿನನಾಥನು ಪೂರ್ಣ ಕಿರಣದಿಂದ ಪ್ರಜ್ವಲಿಸುತ್ತಿರುವನಾದುದರಿಂದ ಇಂತಹ ಸಮಯದಲ್ಲಿ ತಣ್ಣೀರಿನಲ್ಲಿ ಈಜಿದರೆ ದೇಹಾಲಸ್ಯವುಂಟಾಗುವುದು.

ಸರ್ದಾರ್‌ಸಿಂಹ-ಬಾ, ನದಿಯಕಡೆ ಹೋಗೋಣ ಎಂದು ಹೇಳುತ್ತಾ ಪ್ರತಾಪಸಿಂಹನ ಕೈಗಳನ್ನಿಡಿದೆಳೆದುಕೊಂಡು ಹೋದನು

ಸ್ವಲ್ಪದೂರದಲ್ಲಿ ಸುಂದರವಾದ ಸೋಪಾನಗಳೂ, ಉತ್ಸಾಹದಾಯಕವಾದ ಮಂಟಪಗಳೂ ನೋಡತಕ್ಕವರ ಕಣ್ಮನಗಳನ್ನು ಸೆಳೆಯುತ್ತಿದ್ದವು. ಇದನ್ನು ಕಂಡ ಮಹಾರಾಜನು-ಪ್ರತಾಪ, ಈ ಸ್ಥಳವು ಸ್ನಾನಯೋಗ್ಯವಾಗಿರುವುದು ಬಾ ಎಂದನು ರಾಜನೂ, ಮಿತ್ರನೂ ನದಿಯಲ್ಲಿಳಿದು ಸ್ನಾನಮಾಡತೊಡಗಿದರು ಬಹಳಹೊತ್ತು ನದಿಯ ಶುಭ್ರ ಜಲದಲ್ಲಿ ಈಜಿ, ಪ್ರತಾಪನು ಸೂರ್ಯನನ್ನು ನೋಡಿ—ಮಹಾರಾಜ, ಬಹಳ ಹೊತ್ತಾಯಿತು ಈಜುವುದನ್ನು ನಿಲ್ಲಿಸಿ ದಡಕ್ಕೆ ಬಾ ಎಂದು ವಿನಯದಿಂದ ಕೇಳಿದನು

ಸರ್ದಾರ್‌ಸಿಂಹ-ಮಿತ್ರಾ, ಈ ನದಿಯನ್ನು ಬಿಟ್ಟು ಬರಲು ನನಗೆ ಮನಸ್ಸಿಲ್ಲ. ಈ ಪುಣ್ಯನದಿಯ ದರ್ಶನಮಾಡಲು ನಾನೆಷ್ಟು ಪುಣ್ಯಮಾಡಿದ್ದೆನೋ! ಪ್ರತಾಪ, ನಡೆ, ಅಗೋ ಕಾಣಿಸುತ್ತಿರುವ ದೇವಾಲಯಕ್ಕೆ ಹೋಗಿ ಈಶ್ವರ ಧ್ಯಾನಮಾಡಿ ಬರೋಣ.

ಮಹಾರಾಜನ ಮಾತುಗಳನ್ನು ಕೇಳಿದ ಪ್ರತಾಪನು ಹಾಗೆಯೇ ಆಗಲೆಂದು ದಡವನ್ನು ಹತ್ತಲು ಮಿತ್ರರಿಬ್ಬರೂ ಆ ಪಟ್ಟಣದಲ್ಲಿರುವ ಸೌಧಗಳು, ಅಂಗಡಿಯ ಸಾಲುಗಳು, ಕೋಟೆ, ಕೊತ್ತಳ ಮೊದಲಾದವುಗಳನ್ನು ಕಂಡಾನಂದಿಸುತ್ತಾ–'ಸರಸ್ವತೀ ಸದನ' ವೆಂದು ಬಾಗಿಲಲ್ಲಿ ಬರದಿರತಕ್ಕಂಥಾ ಕಟ್ಟಡದ ಸೌಂದರ್ಯ, ಅದರಲ್ಲಿರುವ ವನ-ತರು-ಲತೆಗಳ ಸೌಂದರ್ಯ, ಸೊಂಪು ಇವುಗಳನ್ನು ಕಂಡಾನಂದಿಸಿದರು. ಈ ಸೌಧದ ಸುತ್ತಲೂ ಒಂಭತ್ತು ಸುತ್ತಿರುವ ಒಂದು ಕೋಟೆಯುಂಟು. ಅದರಮಧ್ಯೆ ಸರಸ್ವತೀ ಸದನವು ಇಂದ್ರ ವಿಮಾನದಂತೆ ಶೋಭಿಸುತಿದ್ದಿತು. ನೋಡಿದರೆ ಸಮೀಪದಲ್ಲಿರುವಂತೆ ಕಂಡುಬಂದರೂ ದೇವಾಲಯ, ಅರಮನೆ ಇವುಗಳನ್ನು ಸುತ್ತಿಸುತ್ತಿ ಕೋಟೆಯು ನಿರ್ಮಿಸಲ್ಪಟ್ಟಿತ್ತಾದ್ದರಿಂದ ಇದರ ರಹಸ್ಯವನ್ನು ಭೇದಿಸಲು ಇತರರಿಗೆ ಅಸಾಧ್ಯವಾಗಿದ್ದಿತು. ಮಿತ್ರರಿಬ್ಬರೂ ದೇವಾಲಯವನ್ನು ಹೊಕ್ಕು ಸ್ವಾಮಿ ದರ್ಶನ ಮಾಡಿ ಕೋಟೆಯ ಬಾಗಿಲು ತೆರದಿದ್ದುದರಿಂದ ಅದರ ಸೌಂದರ್ಯವನ್ನು ಕಂಡಾನಂದಿಸಲು ಒಳಕ್ಕೆ ನುಗ್ಗಲು ಅಲ್ಲೊಂದು ಗೋಡೆಯು ಅಡ್ಡವಾಗಲು ಅಲ್ಲೆಲ್ಲಾ ಸುತ್ತಿ

ಸುತ್ತಿ ನೋಡಲು ಅಲ್ಲೊಂದು ಚಿಕ್ಕ ಬಾಗಿಲಿದ್ದುದನ್ನು ಕಂಡು, ಆ ಮಾರ್ಗವಾಗಿ ಬರಲು ಮತ್ತೊಂದು ಗೋಡೆಯು ಅಡ್ಡವಾಯಿತು. ಈ ರೀತಿ ಎಷ್ಟು ಸುತ್ತಿದರೂ ದಾರಿಯೇ ಕಾಣದೆ ಬೇಸತ್ತುದಲ್ಲದೆ, ಹಸಿವು-ಬಾಯಾರಿಕೆಗಳೊಂದುಕಡೆ ಪೀಡಿಸಲಾರಂಭಿಸಿದವು. ಕೋಟೆಯೊಳಕ್ಕೆ ಹೋಗುವುದಕ್ಕಾಗಲಿ, ಕೋಟೆಯಿಂದ ಹೊರಗೆಹೋಗುವುದಕ್ಕಾಗಲಿ ದಾರಿ ತಿಳಿಯಲಿಲ್ಲ. ನಿರ್ಮಾನುಷ್ಯ ಸ್ಥಳ; ಏನು ಮಾಡಿಯಾರು ? ಸುಂದರ ಮಂಧಿರವೇ, ನಮಗಿಂತಹ ಕಷ್ಟವನ್ನುಂಟು ಮಾಡಿದೆಯಾ? ಎಂದು ದೂಷಿಸಿದರು. ಈ ರೀತಿ ಸ್ವಲ್ಪಹೊತ್ತು ಚಿಂತಿಸಿ ಕೊನೆಯಲ್ಲಿ ಪ್ರತಾಪಸಿಂಹನು-ಮಹಾರಾಜ, ತಾವಿಲ್ಲಿಯೇ ಇರುವ ಪಕ್ಷದಲ್ಲಿ ನಾನು ಹೇಗಾದರೂ ಮಾರ್ಗಾನ್ವೇಷಣ ಮಾಡಿ ಕೋಟೆಯನ್ನು ಪ್ರವೇಶಿಸಿ ಅದರಲ್ಲಿ ವಾಸವಾಗಿರತಕ್ಕ ಮನುಷ್ಯರ ಸಹಾಯವನ್ನು ಪಡೆದು, ತಮ್ಮ ಕ್ಷುದ್ಬಾಧೆಯನ್ನು ತೀರಿಸುತ್ತೇನೆ ಎನಲು, ಸರ್ದಾರ್‌ಸಿಂಹನು ನಕ್ಕು-ಪುರುಷಸಿಂಹಗಳೆನ್ನುವ ಹೆಸರನ್ನು ನಮ್ಮ ವಿಷಯದಲ್ಲಿ ನಿರರ್ಥಕಮಾಡಿಕೊಂಡೆವು; ನೀನು ಒಂಟಿಯಾಗಿ ಹೋಗಬೇಡ, ನಾನೂ ಬರುತ್ತೇನೆ, ಇದ್ದರೂ ಸತ್ತರೂ ಇಬ್ಬರೂ ಒಂದೇ ಕಡೆ ಇರುವುದು ಒಳ್ಳೆಯದು ಎಂದು ಹೇಳಿದನು. ಮಹಾರಾಜನನ್ನು ಬರಬೇಡವೆಂದು ಎಷ್ಟು ತಡೆದರೂ ಕೇಳದ್ದರಿಂದ ಕೊನೆಗೆ ಇಬ್ಬರೂ ಹೊರಟರು. ಅದೃಷ್ಟವಶಾತ್ ದಾರಿಯು ಸಿಕ್ಕಿತು, ಆದರ ಜನಸಂಚಾರಮಾತ್ರವಿರಲಿಲ್ಲ. ಪ್ರತಾಪಸಿಂಹನು ಮಾರ್ಗದ್ವಾರದಲ್ಲಿ ನಿಂತು—ಈ ಗೃಹವಾಸಿಗಳು ದಯವಿಟ್ಟು ಮಾರ್ಗತಪ್ಪಿ ಬಂದಿರುವ ಪಥಿಕರಿಗೆ ಮಾರ್ಗವನ್ನು ತೋರಿಸಿ ಉಪಕಾರ ಮಾಡಬೇಕು ಎಂದು ಘಟ್ಟಿಯಾಗಿ ಕೂಗಿದನು. ಪ್ರತ್ಯುತ್ತರವಿಲ್ಲ. ಪುನಃಪುನಃ ಎರಡು ಮೂರಾವರ್ತಿ ಕೂಗಲು ಆ ಮಂದಿರದ ಮಧ್ಯದಿಂದ 'ಯಾರಲ್ಲಿ' ಎನ್ನುವ ಪ್ರತಿಧ್ವನಿಯು ಸ್ತ್ರೀ ಕಂಠದಿಂದ ಹೊರಬಿತ್ತು. ಇದನ್ನು ಕೇಳಿದ ಪ್ರತಾಪಸಿಂಹನು ವಿನಯದಿಂದ—ತಾಯೇ, ನಾವು ದೇವಾಲಯದಿಂದ ದಾರಿತಪ್ಪಿ ಬಂದೆವು. ಹೊರಗೆಹೋಗಲು ದಾರಿತೋರಿಸುವಂತೆ ಕೇಳಲು ಬಂದಿರುವೆವು ಎಂದನು.

ಸುಂದರಿಯಾದ ರಮಣಿಯೊಬ್ಬಳು ಅಲ್ಲಿಗೆ ಬಂದು ಯುವಕರಿಬ್ಬರನ್ನೂ ಸ್ವಲ್ಪ ಹೊತ್ತು ಸ್ತಬ್ಧಳಾಗಿ ನಖಶಿಖಾಪರ್ಯಂತ ನೋಡಿ ಹೊರಟು ಹೋದುದನ್ನು ಕಂಡ ಸರ್ದಾರ್ ಸಿಂಹನು 'ಮಿತ್ರಾ, ನಮ್ಮನ್ನು ತಲೆಯಿಂದ ಕಾಲುವರೆಗೆ ದುರದುರನೆ ದೃಷ್ಟಿಸಿ ನೋಡಿದ ರಮಣಿಯು ಮಾತನಾಡದೆ ಹೊರಟು ಹೋದುದನ್ನು ನೋಡಿದರೆ ಮುಂದೆ ನಮಗೇನೋ ವಿಪತ್ತು ಪ್ರಾಪ್ತವಾಗುವಂತೆ ತೋರುವುದು. ಇದಕ್ಕೇನು ಮಾಡೋಣ?' ಎನ್ನಲು ಪ್ರಾತಾಪನು 'ಮಿತ್ರಾ, ನಿರಪರಾಧಿಗಳಾದ ನಮ್ಮನ್ನು

ಯಾರು ತಾನೇ ಏನು ಮಾಡಬಲ್ಲರು? ತಾಳ್ಮೆಯಿಂದ ಸ್ವಲ್ಪ ಹೊತ್ತಿದ್ದು ನೋಡೋಣ ಏನೇನಾಗುವುದೋ ಆಗ ಗೊತ್ತಾಗುತ್ತದೆ' ಎಂದನು.

ಮೊದಲು ಬಂದ ರಮಣಿಯು ಮತ್ತೆ ಪ್ರವೇಶಿಸಿ ಇವರುಗಳನ್ನು ನೋಡಿ, 'ನೀವು ಕನ್ಯಾಶ್ರಮವನ್ನು ಪ್ರವೇಶಿಸಿದಿರಿ. ನಮ್ಮರಸನಿಗೆ ಈ ವರ್ತಮಾನವು ತಿಳಿದರೆ ನಿಮ್ಮ ಶಿರಚ್ಛೇದಮಾಡದೆ ಬಿಡರು ನಿಮ್ಮ ಮುಖಭಾವದಿಂದ ನೀವು ನಿಷ್ಕಳಂಕರಾದವರೆಂದು ತೋರುವುದು. ನಮ್ಮ ಒಡತಿಯು ಬಂದ ಅತಿಥಿಗಳನ್ನೆಲ್ಲಾ ಆದರದಿಂದ ಉಪಚರಿಸಬೇಕೆಂದು ಕಟ್ಟಪ್ಪಣೆ ಮಾಡಿರುವಳು ಮೊದಲು ನೀವು ನಿಮ್ಮ ಕ್ಷುದ್ಬಾಧೆಯನ್ನು ತೀರಿಸಿಕೊಂಡ ನಂತರ ನಿಮಗೆ ಕೋಟೆಯಿಂದ ಹೋಗಲು ದಾರಿ ತೋರಿಸುವೆನು' ಎಂದಳು. ರಮಣಿಯ ವಾಕ್ಯಗಳನ್ನು ಕೇಳಿದ ಮಹಾರಾಜನು ಮಿತ್ರನ ಕಡೆ ನೋಡಿದನು ಆದರರ್ಥವನ್ನರಿತ ಮಿತ್ರನು 'ಮಹಾರಾಜ, ನಾವು ಸದ್ವಾಕ್ಯವನ್ನು ಅಲ್ಲಗಳೆಯಬಾರದು ಈಗ ನಮಗೂ ಬಹಳ ಹಸಿವಾಗುತ್ತಿದೆ, ಅತಿಥಿ ಸತ್ಕಾರಕ್ಕೆ ಅವರೂ ಆತುರಗೊಳ್ಳುತ್ತಿರುವರು. ನಿನ್ನಂತಹ ಉತ್ತಮ ಶ್ರೇಷ್ಠರಿಗೆ ಭಗವಂತನು ಎಂದೂ ಕೆಡುಕು ಮಾಡಲಾರನು. ಸರ್ವಮಂಗಳವುಂಟಾಗುವುದು, ಬಾ. ಈ ರಮಣಿಯು ಬಡಿಸುವ ಭೋಜನವನ್ನುಂಡು ಬರೋಣ' ಎಂದು ಹೇಳಲು ಅರಸನೂ, ಮಿತ್ರನೂ ಮಂದಿರದೊಳಕ್ಕೆ ನಡೆದರು.

ಹೋಗುವ ಮಾರ್ಗದಲ್ಲಿ ಸುಂದರಿಯ ರೂಪವು ಗೋಚರಿಸಿತು. ಆಶ್ಚರ್ಯದಿಂದ ಅದರ ಸಮೀಪಕ್ಕೆ ಹೋಗಿ ನೋಡಲು ತೈಲಚಿತ್ರಪಟವೆಂದರಿತು ಅದರ ಸಮೀಪದಲ್ಲಿ ಸ್ವಲ್ಪ ಹೊತ್ತು ಸ್ತಬ್ಧನಾಗಿ ನಿಂತು ನೋಡಲು ಆ ರಮಣಿಯ ಹೆಸರು 'ಸುಖಲತಾ' ಎಂದು ಬರೆದಿರುವುದನ್ನು ಕಂಡನು.

## ಐದನೆಯ ಅಧ್ಯಾಯವು.

### ಸಂಗೀತ ಸಂಭ್ರಮ.




ಹಮೀರ ಕಲ್ಯಾಣಿ ರಾಗದಲ್ಲಿ ಬಹಳ ಇಂಪಾಗಿ ಯಾರೋ ಗಾನ ಮಾಡುತಿದ್ದರು. ಸ್ವರದ ಶ್ರಾವ್ಯವಾದ ಪಲ್ಲವಿಯನ್ನು ಮತ್ತೆಮತ್ತೆ ಹೇಳುವ ವಿಮರ್ಶೆ, ರಾಗ-ತಾಳ-ಶ್ರುತಿಲಯಗಳು ತಪ್ಪದೆ ವೀಣೆಯಲ್ಲಿ ನುಡಿಸುವ ವಿನೋದವನ್ನು ಕೇಳಿ ಯಾವ ಮಾನವ ಹೃದಯವು ಆನಂದಗೊಳ್ಳದು! ವೀಣೆ ನುಡಿಸುವ ಚಾತುರ್ಯವೂ, ಮೃದುವಾದ

ಇಂಪಾದ ಧ್ವನಿ ಇವುಗಳಿಂದ ಕೂಡಿದ ರಮಣಿಯು ಹಮೀರ ಕಲ್ಯಾಣಿ ರಾಗದಲ್ಲಿ ಹಾಡಿದ ಹಾಡನ್ನು ಪೂರೈಸಿ ಮೋಹನರಾಗವನ್ನಾಲಾಪಿಸಲು ವೀಣೆಯು ಸಿಂಹದಂತೆ ಘರ್ಜಿಸಿತು ಅನಂತರ ತೋಡಿರಾಗವನ್ನಾಲಾಪಿಸಲು ಶ್ರೋತೃಗಳ ನಯನಗಳಲ್ಲಿ ಆನಂದ ಬಾಷ್ಪವು ಪ್ರವಹಿಸಲಾರಂಭಿಸಿತು. ವಸಂತ, ಕಲ್ಯಾಣಿ, ಆರಭಿ ಮೊದಲಾದ ರಾಗಗಳು ಆಲಾಪಿಸಲ್ಪಟ್ಟವು ಸಮಯಕ್ಕೆ ತಕ್ಕ ರಾಗಗಳನ್ನು ನುಡಿಸುವುದರಿಂದ ಎಂತಹ ದುಃಖಿಯ ಹೃದಯವಾದರೂ ಶಾಂತವಾಗಬಲ್ಲುದು. ಉದ್ಯಾನವನದಲ್ಲಿದ್ದ ಪಕ್ಷಿಗಳೆಲ್ಲವೂ ಗಾನಶ್ರವಣದಿಂದ ಆಹಾರವುಣ್ಣದೆ ನಿಸ್ತಬ್ಧವಾಗಿದ್ದವು ಈಶ್ವರನನ್ನು ಗಾನದಿಂದ ಸ್ತೋತ್ರಮಾಡತಕ್ಕವರು ಯಾರಾಗಿರಬಹುದು? ಜಗದಂಬಿಕೆ! ಜಗನ್ಮೋಹಿನಿ! ಜಗತ್ಕಾರಣಿ! ತ್ರಿಲೋಕಸುಂದರಿ! ನಿತ್ಯಾನಂದ ರೂಪಿಣೀ! ಶ್ರೀವಾಣೀ! ದೇವಿ! ಕೃಪಾಕಟಾಕ್ಷಿಣೀ ಎನ್ನತಕ್ಕ ಸ್ತೋತ್ರಗಳನ್ನು ಮಧ್ಯಮಾವತಿ ರಾಗದಲ್ಲಿ ಹಾಡತಕ್ಕವರು ಯಾರಾಗಿರಬಹುದು? ಎರಡು ಘಂಟೆಯು ಹೊತ್ತಾದರೂ ಸಂಗೀತವು ನಿಲ್ಲಲಿಲ್ಲ. ಪ್ರಾರಂಭದ ಮೊದಲು ಅಂತ್ಯದವರೆಗೂ ಆನಂದ ರಸವು ತುಂಬಿ ತುಳುಕುತಿದ್ದುದಲ್ಲದೆ ದೇವ ಗಾನವೂ ಕೂಡ ಇದಕ್ಕೆ ಸಮವಿಲ್ಲವೆನ್ನುವಂತಿದ್ದಿತು. ಗಾನಾನಂದಿನಿಯಾದ ದೇವಿಯೇ ಹಾಡತಕ್ಕನರಿಗೆ ಇಂತಹ ಶಕ್ತಿಯನ್ನು ಕೊಟ್ಟಿರುವಳೆಂದು ಗಾನಶ್ರವಣಮಾಡುವವರು ಊಹಿಸುತ್ತಿದ್ದರು.

ಮಂಗಳವನ್ನು ಹಾಡಿ ಪೂರೈಸಿದ ಕೂಡಲೇ ವೀಣೆಯು ನಿದ್ರೆಹೊಂದಿತು, ರಮಣಿಯ ಕಂಠನಾದವು ನಿಂತಿತು, ಸ್ತಬ್ಧವಾಗಿದ್ದ ಶುಕಪಿಕಗಳೆಲ್ಲವೂ ಎಚ್ಚತ್ತವು. ಅಲ್ಲಿದ್ದವರ ಮುಖಗಳು ವಿವರ್ಣವಾದವು. ಆದಿನ ಶುಕ್ರವಾರವಾದುದರಿಂದ ಸುಖಲತೆಯು ಶ್ರೀ ಮಹೇಶ್ವರಿಯನ್ನು ಭಕ್ತಿಯಿಂದ ಪೂಜಿಸಿದಳು. ಪೂಜೆಯು ಮುಗಿದ ನಂತರ ಅವಳ ಮನಸ್ಸಿಗೊಂದು ವಿಧವಾದ ಆನಂದವುಂಟಾಯಿತು ಮೆಲ್ಲಗೆ ದೇವಾಲಯವನ್ನು ಬಿಟ್ಟು ಬರಲು ಪದ್ಮಲತೆಯು ಅವಳ ಮುಖದಲ್ಲಿನ ಬೆವರಿನ ತುಂತುರುಗಳನ್ನು ಒರಸಿ ಬೀಸಣಿಗೆಯಿಂದ ಬೀಸಲಾರಂಭಿಸಿದಳು ಸ್ವಲ್ಪಹೊತ್ತು ಇಬ್ಬರೂ ಸುಮ್ಮನಿದ್ದರು. ತರುವಾಯ ಅವರಲ್ಲಿ ಈ ಕೆಳಗೆ ಕಂಡುಬರುವ ಸಂಭಾಷಣೆಯು ನಡೆಯಿತು.

**ಸುಖಲತೆ**-ಪದ್ಮಾ, ಮಾತೆಯನ್ನು ಬಿಟ್ಟು ಬರಲು ನನಗೆ ಮನಸ್ಸೇ ಬರಲಿಲ್ಲ.

**ಪದ್ಮಲತೆ**-ಸಖೀ, ನಿನ್ನ ಮಾತೆಯು ನಿನ್ನ ಹೃದಯದಲ್ಲಿಯೇ ಇರುವಳಲ್ಲದೆ ಬೇರೆಯಾಗಿಲ್ಲ. ಬಹಳ ಹೊತ್ತು ಮಹೇಶ್ವರಿಯ ಧ್ಯಾನದಲ್ಲಿದ್ದುದರಿಂದ ಫಲವು ಬೇಗನೆ ಲಭಿಸುವುದು. ಭೋಜನಕ್ಕೆ ಹೋಗೋಣ, ಬಾ.

**ಸುಖಲತೆ**-ಪದ್ಮಾ, ನಿನ್ನ ಕುಚೋದ್ಯವನ್ನು ನೀನೆಂದೂ ಬಿಡುವುದಿಲ್ಲ. ಫಲವನ್ನು ಉದ್ದೇಶಿಸಿ ನಾನು ದೇವಿಯನ್ನು ಪೂಜಿಸಲಿಲ್ಲ. ನನ್ನ ಸ್ವಭಾವವನ್ನು ನೀನು ಪೂರ್ಣವಾಗರಿತಿದ್ದರೂ ಈ ರೀತಿ ಹೇಳುವುದನ್ನು ನೋಡಿದರೆ ನನಗಾಶ್ಚರ್ಯ ವಾಗುವುದು.

**ಪದ್ಮಲತೆ**-ಇಲ್ಲ, ಇಲ್ಲ. ಫಲವು ದೊರೆತಾಗ ಬೇಡವೆಂದು ಹೇಳುವಿಯೇನು? ಆಹಾ! ನಿನ್ನಂಥವರೆಷ್ಟೋ ಜನರನ್ನು ನೋಡಿದ್ದೇನೆ. ತೊಂಬತ್ತೊಂಬತ್ತಾದ ನಂತರ ನಿನ್ನ ಲೆಕ್ಕ ನೂರು.

**ಸುಖಲತೆ**-ಸಖೀ, ಫಲವನ್ನುದ್ದೇಶಿಸಿ ಯಾವ ಕಾರ್ಯವನ್ನೂ ಮಾಡಬಾರದೆಂದು ನೀನೇ ಹೇಳಿರುವೆಯಲ್ಲವೇ ?

**ಪದ್ಮಲತೆ**-ಹೌದು. ನಾನು ಹೇಳಿದ್ದೇನೋ ನಿಶ್ಚಯವೇ. ಆದರೂ ಹುಡುಕುತಿದ್ದ ಮೂಲಿಕೆಯು ಕಾಲಿಗೆಡವಿದರೆ ತೆಗೆದುಕೊಳ್ಳುವೆಯೋ ಬಿಡುವೆಯೋ ಹೇಳು ?

**ಸುಖಲತೆ**-ಪದ್ಮಾ, ನೀನು ಹರಟೆಮಲ್ಲಿ! ನಿನ್ನೊಡನೆ ವಾದಿಸಲು ನನ್ನಿಂದಾಗದು ತಂಗಾಳಿಯು ಬೀಸುವಕಡೆ ಹೋಗಿ ಸ್ವಲ್ಪ ಹೊತ್ತು ಕುಳಿತಿರುತ್ತೇನೆ.

**ಪದ್ಮಲತೆ**-ಸಖೀ, ಹೇಗೆ ಇಷ್ಟವೋ ಹಾಗೆ ಮಾಡು ನೀನು ವಾಯುಸೇವನೆ ಮಾಡುತ್ತ ಇಲ್ಲಿಯೇ ಈ ಸ್ಫಟಿಕ ಶಿಲಾಸನದಲ್ಲಿ ಕುಳಿತಿರು. ನಾನು ಹೋಗಿ ಭೋಜನಕ್ಕೆ ಬೇಕಾದುದನ್ನು ಸಜ್ಜುಗೊಳಿಸುವೆನು—ಎಂದು ಹೇಳಿ ಹೊರಟು ಹೋಗಲು, ಸುಖಲತೆಯು ಅಲ್ಲಿದ್ದುದೊಂದು ಶಿಲಾಸನದಲ್ಲಿ ಮಲಗಲು, ಸ್ವಲ್ಪ ಹೊತ್ತಿಗೆಲ್ಲಾ ಅವಳಿದುರಿನಲ್ಲಿ ಒಂದು ಪುರುಷವ್ಯಕ್ತಿಯು ಗೋಚರಿಸಲು, ಮಲಗಿದ್ದವಳು ಎದ್ದು ನಗುತ್ತಾ, 'ಪದ್ಮಾ, ಓಡಿಬಾ ಓಡಿಬಾ' ಎಂದು ಕೂಗಿದಳು.

ಸುಖಲತೆಯು ಪದ್ಮಲತೆಯನ್ನು ಕೂಗಿದುದನ್ನು ಕೇಳಿದ ಮಾನಸಿಂಹನು ಮತ್ತಿಷ್ಟು ಸಮೀಪಕ್ಕೆ ಬಂದು—'ಮಹಾರಾಣೀ, ನಗುವೆಯೇಕೆ? ನನಗೆ ವಿವಾಹ ವಾಗುತ್ತದೆಂದು ಹೇಳಿದೆ. ಅದನ್ನು ಕೇಳಿದ ಮಿತ್ರರು ನನ್ನನ್ನೀ ಪುಷ್ಪಗಳಿಂದಲಂಕರಿಸಿದರು. ನನ್ನಲಂಕಾರವನ್ನು ಕಂಡಾನಂದಿಸಿದ ಪದ್ಮಲತೆಯೇ ನನ್ನನ್ನು ನಿನ್ನ ಬಳಿಗೆ ಕಳುಹಿಸಿವಳು. ನಾನೀಗ ಬಂದಿದೇನೆ ಅಂದವಾಗಿರುವೆನೋ ಇಲ್ಲವೋ? ಹೇಳು' ಎಂದನು.

ರಾಜಪುತ್ರಿಯು ಮೊದಲಿಗಿಂತಲೂ ಹೆಚ್ಚಾಗಿ ನಕ್ಕು 'ಮಾನಸಿಂಹ, ಇದು ವಿವಾಹ ಶೃಂಗಾರವೋ! ಎಕ್ಕ, ಹತ್ತಿ, ಕತ್ತಾಳೆಯೇ ಮೊದಲಾದ ಅತ್ಯುತ್ತಮವಾದ ಕಾಡು ಹೂಗಳಿಂದ ನಿನ್ನ ಯೋಗ್ಯತೆಗೆ ತಕ್ಕಂತೆಯೇ ಶೃಂಗಾರಮಾಡಿ ಕಳುಹಿಸಿರುವರು! ಹಾರವು ಬಹಳ ಅಂದವಾಗಿರುವುದು? ನಿನ್ನ ಸ್ನೇಹಿತರು ಯಾರು? ಅವರನ್ನಿಲ್ಲಿಗೆ ಕರೆದುಕೊಂಡು ಬಾ' ಎಂದಳು

ಮಾನಸಿಂಹನು ಓಡಿಹೋಗಿ ಮತ್ತೆ ತಿರುಗಿ ಬಂದು, 'ಇದೋ ನೋಡು, ನನ್ನನ್ನು ಶೃಂಗರಿಸಿದವರು ಇವರೇ?' ಎಂದು ತೋರಿಸಲು ಮಂದಹಾಸ ವದನದಿಂದ ಸುಖಲತೆಯು ಎದ್ದು ನೋಡಲು ಹೋದಳು ಆಗತಾನೇ ಸ್ನಾನ ಮಾಡಿದ್ದುದರಿಂದ ಕೇಶರಾಶಿಗಳನ್ನು ಕಟ್ಟಿರಲಿಲ್ಲವಾದುದರಿಂದ ಕೇಶವು ಮಂಚದ ಸಂದಿಯಲ್ಲಿ ಸಿಕ್ಕಿಕೊಳ್ಳಲು ಅದನ್ನು ತೆಗೆಯುವುದಕ್ಕಾಗಿ ರಮಣಿಯು ಹಿಂದೆ ನಿಂತಳು. ಮಾನಸಿಂಹನು ಉನ್ಮತ್ತ ನಾಟ್ಯವಾಡುತಲೇ ಇದ್ದನು

ಮಂಟಪದ ಹೊರಭಾಗದಲ್ಲಿ ವೀರರಸಕಾಂತಿಯಿಂದ ಪ್ರಕಾಶಿತನಾದ ರಾಜಪುರುಷನೊಬ್ಬನು ಅವನ ಸ್ನೇಹಿತನೊಡನೆ ಆನಂದಸಂಭಾಷಣೆಗೈಯುತಿದ್ದುದನ್ನು ಕಂಡ ಸುಖಲತೆಯು ಭ್ರಮಿಸಿದಳು ಮನಸ್ಸಿಗೆ ಭೀತಿಯು ತೋರಲು ಮಂಚವನ್ನು ಬಿಟ್ಟು ದೂರ ಸರಿದು ನಿಂತಳು ಆ ಸ್ಥಳವನ್ನು ಬಿಟ್ಟು ಹೊರಟು ಹೋಗೋಣವೆಂದರ ಹೊರಕ್ಕೆ ಹೋಗಲು ಇದ್ದ ಒಂದೇ ಒಂದು ಮಾರ್ಗಕ್ಕೆ ಅಡ್ಡಲಾಗಿ ಆ ರಾಜಪುರುಷನೂ ಅವನ ಸ್ನೇಹಿತರೂ ನಿಂತಿದ್ದರು.

ಈ ಸಂಭ್ರಮ ಮಧ್ಯದಲ್ಲಿ ಮಾನಸಿಂಹನು—'ಮಹಾರಾಣೀ, ನನ್ನನ್ನು ನೋಡು ನಾನು ಅಂದವಾಗಿಲ್ಲವೇ? ಸುಂದರವಾಗಿಲ್ಲವೇ? ಹೇಳು. ಪದ್ಮಲತೆಯು ನನ್ನಂತಹ ಸುಂದರನು ಬ್ರಹ್ಮಸೃಷ್ಟಿಯಲ್ಲೇ ಇಲ್ಲವೆಂದಳು. ನೀನದೇಕೆ ಹಾಗೆ ಹೇಳುವುದಿಲ್ಲ?' ಎಂದು ಹೇಳಿದ್ದನ್ನು ಕೇಳಿದ ಸುಖಲತೆಗೆ ತಡೆಯಲಾರದಷ್ಟು ನಗುವು ಉಕ್ಕಿಬಂದರೂ ಇದರ ನಿವಾರಣಾರ್ಥವಾಗಿ ಸೆರಗಿನಿಂದ ಭದ್ರವಾಗಿ ಬಾಯನ್ನು ಮುಚ್ಚಿಕೊಂಡಳು.

ಇಷ್ಟರಲ್ಲಿ ಪದ್ಮಲತೆಯು ಅಲ್ಲಿಗೆ ಬಂದು, 'ಸಖೀ, ಭೋಜನವು ಸಿದ್ಧವಾಗಿರುವುದು. ಬಾ, ಹೋಗೋಣ' ಎಂದಳು. ಮಾನಸಿಂಹನು 'ಪದ್ಮಲತಾ, ನೋಡು ನಾನು ಕುರೂಪಿಯೆಂದು ಮಹಾರಾಣಿಯು ಹೇಳುವಳು. ನೀನಾದರೂ ನಾನು ಸುಂದರನೆಂದು ಅವಳಿಂದ ಹೇಳಿಸಬಾರದೇ?' ಎಂದು ದಮ್ಮಯ್ಯಗುಡ್ಡೆ ಹಾಕುತ್ತ

ರಲು, ಪದ್ಮಲತೆಯು 'ಮೂರ್ಖಾ ಬಾಯಿ ಮುಚ್ಚು ಇಲ್ಲದಿದ್ದರೆ ನಿನ್ನನ್ನೀ ತೋಟದಿಂದಾಚೆ ಓಡಿಸುವೆನು' ಎಂದು ಕೋಪದಿಂದ ಹೇಳಲು, 'ಇಲ್ಲ, ಇಲ್ಲ' ಎಂದು ಮತ್ತೆ ಉನ್ಮತ್ತ ನಾಟ್ಯವಾಡಲು ಮೊದಲು ಮಾಡಿದನು ಮತ್ತೆ ಸ್ವಲ್ಪ ಹೊತ್ತಾದನಂತರ ಮಾತನಾಡಲು ಮಾನಸಿಂಹನು ಬಾಯೆತ್ತಲು, ಪದ್ಮಲತೆಯು 'ಮಾನಸಿಂಹಾ, ಸುಮ್ಮನಿರುವೆಯೋ, ಇಲ್ಲವೋ?' ಎಂದು ಘರ್ಜಿಸಲು, ಅವನು ಹೆದರಿ ಸುಖಲತೆಯ ಮಂಚದ ಕೆಳಗೆ ಹೋಗಿ ಬಚ್ಚಿಟ್ಟುಕೊಂಡನು. ತರುವಾಯ ಪದ್ಮಲತೆಯು ರಾಜಪುತ್ರನನ್ನೂ ಅವನ ಸಖನನ್ನೂ ಉದ್ದೇಶಿಸಿ-'ಅತಿಥಿಗಳೇ, ನಿಮಗೂ ಭೋಜನವು ಸಿದ್ಧವಾಗಿರುವುದು ಭೋಜನವಾದನಂತರ ಈ ರಾಜಗೃಹದಲ್ಲಿರುವ ಅತಿಶಯಗಳನ್ನು ನೋಡಬಹುದು' ಎಂದು ಹೇಳಲು, ಅವರೂ ಅದಕ್ಕೆ ಸಮ್ಮತಿಸಿ ಅರಮನೆಯಕಡೆ ಹೋದರು.

ಪದ್ಮಲತೆಯು ಸುಖಲತೆಯ ಕರಗಳನ್ನು ಹಿಡಿದುಕೊಂಡು ಅರಮನೆಗೆ ಹೊರಡಲುದ್ಯುಕ್ತಳಾಗಲು, ಸುಖಲತೆಯು ಅವಳನ್ನು ತಡೆದು 'ಪದ್ಮಾ, ಸ್ವಲ್ಪನಿಲ್ಲು ಹೋಗೋಣ' ಎಂದು ಹೇಳಲು, ಪದ್ಮಲತೆಯು 'ಸಖೀ, ಏನು ವಿಶೇಷ? ಯಾತಕ್ಕಾಗಿ ಇಲ್ಲಿ ನಿಲ್ಲಬೇಕೆನ್ನುವೆ?' ಎಂದು ಕೇಳಲು, ರಾಜಕುಮಾರಿಯು ಯಾವ ಉತ್ತರವನ್ನೂ ಕೊಡದೆ ಮೌನವಾಗಿದ್ದಳು.

ಪುನಃ ಪದ್ಮಲತೆಯು 'ರಾಜಕುಮಾರೀ, ಈ ಆಷಾಡಭೂತಿ ವಿದ್ಯೆಯನ್ನಿಲ್ಲಿ ಯಾರಿಗೆ ತೋರಿಸುವೆ? ನಾನು ನಿನ್ನೆತಾನೇ ಕಣ್ಣುಬಿಟ್ಟ ಹಸುಗೂಸೆಂದೂ, ಯಾವ ವಿಷಯವನ್ನೂ ನಾನರಿಯೆನೆಂದೂ ಭಾವಿಸಿರುವೆಯಾ? ನೀನು ಭಕ್ತಿಯಿಂದ ಈಶ್ವರಿಯನ್ನರ್ಚಿಸಿದ ಫಲವು ಈಗ ದೊರೆಯಿತು ಬೇಕೆನ್ನುವಿಯೋ, ಅಥವಾ ಬೇಡವೆಂದು ನಿರಾಕರಿಸುವೆಯೋ? ಇರಲಿ ಈ ಚರ್ಚೆ ಈಗ ಏಕೆ? ಸಮಯ ಬಂದಾಗ ಚರ್ಚಿಸೋಣ, ನಡೆ ಹೋಗೋಣ' ಎಂದು ಹೇಳಲು, ಸುಖಲತೆಯು ಬಗ್ಗಿಸಿದ್ದ ತಲೆಯನ್ನು ಮೇಲಕ್ಕೆತ್ತಿ 'ಸಖೀ, ಬಂದಿರುವ ರಾಜಪುತ್ರರಾರು? ಆತನೊಡನೆ ಬಂದಿರುವ ಮತ್ತೊಬ್ಬ ಪುರುಷನಾರು? ಇವರೆಲ್ಲಿಂದ ಬಂದರು?' ಎಂದಳು.

**ಪದ್ಮಲತೆ**- ನಾನರಿಯೆ. ಬಹುಶಃ ನಿನ್ನ ಚಿಕ್ಕಮ್ಮನು ಕರೆತಂದಿರಬಹುದು! ನಿನ್ನಂತೆಯೇ ನನಗೂ ಬಹಳ ಆಶ್ಚರ್ಯವುಂಟಾಗುತ್ತಿರುವುದು.

**ಸುಖಲತೆ**- ಸಖೀ, ನೀನಿರುವಾಗ ಒಂದು ನೊಣವು ಕೂಡ ಈ ಕೋಟೆಯನ್ನು ಪ್ರವೇಶಿಸಿ ಸಂಚರಿಸಲು ಭಯಪಡುವಾಗ ನಿಜವಾಗಿಯೂ ಮನುಷ್ಯರು ಧಾರಾಳ

ನಾಗಿ ಪ್ರವೇಶಿಸಲು ಅವಕಾಶ ಕೊಡುವೆಯಾ? ನಿನ್ನ ಚಾತುರ್ಯವನ್ನು ನನ್ನಲ್ಲಿ ಮರೆಮಾಜಬೇಡ, ನಿಜವನ್ನು ಹೇಳು.

**ಪದ್ಮಲತೆ** ಸುಖಲತಾ, ಅವರ ಗೊಡವೆ ನಿನಗೇಕೆ? ಅವರ ಕುಲ-ಗೋತ್ರ-ಪ್ರವರಾದಿಗಳ ಚಿಂತೆ ನಿನಗೇಕೆ? ಅವರ ಪರಿಚಯದಿಂದ ತಾನೇ ನಿನಗೇನು ಪ್ರಯೋಜನ? ಏಳು, ನನಗೆ ಹಸಿವಾಗುತ್ತಿದೆ, ಭೋಜನಕ್ಕೆ ಹೋಗೋಣ ಭೋಜನದಿಂದ ಹಸಿವಾದರೂ ಶಾಂತವಾಗುವುದು. ಈ ರಾಜಪುತ್ರರ ವಿಷಯವನ್ನರಿಯುವುದರಿಂದ ಪ್ರಯೋಜನವೇನು?

**ಸುಖಲತೆ**-ಪದ್ಮಾ, ನನ್ನಲ್ಲಿಯೂ ಮುಚ್ಚುಮರೆಯೇ? ನೀನು ಹೇಳಿದ ಹೊರ್ತು ನಾನು ಬರಲಾರೆ ನನಗೆ ಭೋಜನವು ಅವಶ್ಯಕವಿಲ್ಲ.

**ಪದ್ಮಲತೆ**-ಓಂ ಪ್ರಥಮದಲ್ಲೇ ಇಷ್ಟು ಹಠವಾದರೆ! ಅವರು ಪಥಿಕರು, ಮಾರ್ಗ ತಪ್ಪಿ ಕೋಟೆಯನ್ನು ಪ್ರವೇಶಿಸಿದರಂತೆ ಕ್ಷುದ್ಬಾಧಾಪೀಡಿತರಾದವರಿಗೆ ಅತಿಥಿ ಪೂಜೆ ಮಾಡಿ ಕಳುಹಿಸುವುದು ನಮ್ಮ ಕರ್ತವ್ಯವೆಂದರಿತು ಭೋಜನವನ್ನು ಸ್ವೀಕರಿಸಿ ಹೋಗಬಹುದೆಂದು ಕೇಳಿಕೊಂಡೆನು ಇಷ್ಟೇ, ತಂತ್ರವೇನೂ ಇಲ್ಲ. ವಿಷಯವು ತಿಳಿಯಿತಲ್ಲ, ಈಗಲಾದರೂ ಭೋಜನಕ್ಕೇಳು

ಪದ್ಮಲತೆಯ ಮಾತುಗಳನ್ನು ಕೇಳಿದ ಸುಖಲತೆಯ ಮುಖವು ವಿವರ್ಣವಾಯಿತು. ಕುಳಿತಿದ್ದವಳು ಮೌನವಾಗಿ ಮಂಚದಲ್ಲಿ ಪುನಃ ಮಲಗಿಕೊಳ್ಳಲು, ಪದ್ಮಲತೆಯು 'ರಾಜಪುತ್ರೀ, ಇದೇನು ಹುಡುಗಾಟ? ಏಳು, ಭೋಜನಕ್ಕೆ ಹೊತ್ತಾಗಲಿಲ್ಲವೇ?' ಎಂದು ಕೈಹಿಡಿದು ಎಬ್ಬಿಸಿದಳು ರಾಜಪುತ್ರಿಯು ಪ್ರತಿಮಾತನಾಡದೆ ಎದ್ದುದನ್ನು ಕಂಡ ಪದ್ಮಲತೆಯು ನಗಲು, ಸುಖಲತೆಯು ಅವಳ ಮನೋಭಿಪ್ರಾಯವನ್ನರಿತವಳಾಗಿ ಲಜ್ಜೆಯಿಂದ ಒಂದೇಟು ಹೊಡೆದಳು. ಅದಕ್ಕೆ 'ಸಖೀ, ಇದು ಪ್ರಥಮ ಬಹುಮಾನವೋ?' ಎಂದು ಪ್ರಶ್ನೆಮಾಡಲು, ರಾಜಪುತ್ರಿಯು ಬಾಯ್ದೆರೆಯದಿದ್ದುದನ್ನು ಕಂಡು 'ಹಾಗಾದರೆ ನಾನೀಗಲೇ ಹೋಗಿ ವಿವಾಹಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಗೊಳಿಸುವೆನು' ಎಂದು ಹೇಳಿ ಎರಡು ಹೆಜ್ಜೆ ಮುಂದಿಡಲು, ಸುಖಲತೆಯು ಮಲಗಿದ್ದವಳೆದ್ದು 'ಪದ್ಮಾ ಪದ್ಮಾ, ಇದೇನು ಹುಡುಗಾಟ? ವಿವಾಹವಾರಿಗೆ, ನಿನಗೋ, ವರನೆಲ್ಲಿ?' ಎಂದು ಕೇಳುತ್ತಿರುವಷ್ಟರಲ್ಲಿಯೇ ಮಂದಮತಿಯಾದ ಮಾನಸಿಂಹನು 'ವಿವಾಹವು ನನಗೆ' ಎಂದು ಹೇಳುತ್ತಾ ಹಠಾತ್ತಾಗಿ ಎದುರಿನಲ್ಲಿ ನಿಲ್ಲಲು, ರಾಜಕುಮಾರಿಯು ಭ್ರಮಿಸಿ 'ಛೀ! ಮೂರ್ಖಾ, ದೂರ ನಡೆ' ಎಂದು ಹೇಳಿ

ಪದ್ಮಲತೆಯಕಡೆ ತಿರುಗಿ ಪದ್ಮಾ, ಇದೇನು? ಶಿವಪೂಜೆಯಲ್ಲಿ ಕರಡಿಮರಿ ಬಂದಿದೆ!' ಎಂದು ಹೇಳಲು, 'ಕರಡಿಮರಿ ಬಂದಿದ್ದರೆ ಇದೋ ನಾನು ಬೇಟೆಯಾಡಲು ಬಂದಿದ್ದೇನೆ!' ಎಂದು ಹೇಳಿ ಪದ್ಮಲತೆಯು ಒಂದೇ ಹಾರಿಗೆ ಹಾರಿ ಮಾನಸಿಂಹನ ಜುಟ್ಟು ಹಿಡಿದೆಳೆದು 'ಇದೇ ವಿವಾಹ ಸಂಭ್ರಮ' ಎಂದು ಹೇಳುತ್ತ ಅವನನ್ನು ಹಿಂಸಿಸಲು, ಅವನು 'ಅಯ್ಯೋ! ನನಗೆ ವಿವಾಹವೂ ಬೇಡ, ಏನೂ ಬೇಡ; ನಾನು ಹೋಗುತ್ತೇನೆ, ನನ್ನನ್ನು ಬಿಡು' ಎಂದು ಒದರಲು 'ಹಾಗಾದರೆ ನಿನಗೆ ವಿವಾಹವಿಲ್ಲ, ಓಡು' ಎಂದು ಹೇಳಲು, ಮಾನಸಿಂಹನು ಬೀಳುವುದೇಳುವುದನ್ನು ಕೂಡ ನೋಡದೆ ಓಡಿಹೋಗಿ ಮತ್ತೆ ಬಾದು 'ಎಲ್ಲಿ? ಈಗ ಹೊಡಿ ನೋಡೋಣ!' ಎನ್ನಲು, ಪದ್ಮಲತೆಯು 'ಅದಿರಲಿ ನೀನು ಹೋಗಿ ಹೊಸದಾಗಿ ಬಂದಿರುವರನ್ನು ಕರೆದುಕೊಂಡು ಬಾ, ಅವರನ್ನು ನಿನ್ನ ವಿವಾಹಕ್ಕೆ ಸಾಕ್ಷಿಯಿಡುತ್ತೇನೆ' ಎಂದಳು. ಮಂದಮತಿಯಾದ ಮಾನಸಿಂಹನು ಒಂದೇ ಉಸಿರಿಗೆ ಓಡಲು ರಮಣಿಯರಿಬ್ಬರೂ ಬಿದ್ದುಬಿದ್ದು ನಗಲಾರಂಭಿಸಿದರು.



## ಆರನೆಯ ಅಧ್ಯಾಯವು.




### ಅಪ್ಪಣೆ ಕೊಡುವಿಕೆ.

ಲ್ಪರೀತಿಯಾಗಿ ಆ ರಾಜಗೃಹವು ನಿರ್ಮಿಸಲ್ಪಟ್ಟಿದ್ದಿತು. ವಿನೋದ ಮಹಲಿನ ಶೃಂಗಾರವನ್ನು ವರ್ಣಿಸಲಾರಿಂದ ಸಾಧ್ಯ? ರೇಷ್ಮೆ, ಕಿಂಕಾಬು, ಮತ್ತು ನವರತ್ನ, ಮೃದುವಾದ ರೆಕ್ಕೆಗಳು ಮೊದಲಾದ ಅನೇಕ ಆಶ್ಚರ್ಯ ವಿನೋದ ವಸ್ತುಗಳು ಶೋಭಿಸುತಿದ್ದವು. ಸ್ವರ್ಣಪಾತ್ರೆಗಳು ಒಂದುಕಡೆ ಸಾಲಾಗಿಡಲ್ಪಟ್ಟಿದ್ದವು. ಸುಗಂಧವಾಸನೆಯು ದಶದಿಕ್ಕುಗಳಲ್ಲಿಯೂ ವ್ಯಾಪಿಸಿದ್ದಿತು. ಮಧ್ಯೆ ಇದ್ದ ಒಂದು ಸೋಫಾದ ಮೇಲೆ ಯುವಕನೊಬ್ಬನು ಕುಳಿತು ತಾಂಬೂಲವನ್ನು ಧರಿಸುತಿದ್ದನು. ಮತ್ತೊಬ್ಬ ಪುರುಷನು ಸಮೀಪದಲ್ಲಿ ನಿಂತಿದ್ದನು ತರುಣಿಯೊಬ್ಬಳು ಸ್ವಲ್ಪ ದೂರದಲ್ಲಿ ಮತ್ತೊಂದಾಸನದಲ್ಲಿ ಕುಳಿತಿದ್ದಳು ಮೇಲ್ಕಂಡ ರೀತಿಯಲ್ಲಿ ವಿನೋದ ಸಂಭಾಷಣೆಗೈಯುತಿದ್ದವರು ಸರ್ದಾರ್‌ಸಿಂಹ-ಪ್ರತಾಪಸಿಂಹ-ಪದ್ಮಲತೆಯರಲ್ಲದೆ ಬೇರೆ ಯಾರೂ ಅಲ್ಲ.

**ಪದ್ಮಲತೆ**-ರಾಜಾಧಿರಾಜರಾದ ನೀವುಗಳು ದರಿದ್ರರಾದ ನಮ್ಮ ಗೃಹಕ್ಕೆ ದಯಮಾಡಿಸಿದುದಕ್ಕಿಂತ ಹೆಚ್ಚಾದ ಭಾಗ್ಯವು ಮತ್ತಾವುದಿರುವುದು? ಕಾಲವಿಳಂಬವಾಗು

ತ್ತಿರುವುದರಿಂದ ತಾವು ದಯಮಾಡಿಸಬಹುದು. ನಾನು ಮಾರ್ಗವನ್ನು ತೋರಿಸುವೆನು.

**ಸರ್ದಾರ್ ಸಿಂಹ**-ನಾವು ಅದೃಷ್ಟವಂತರಾದ್ದರಿಂದಲೇ ತಮ್ಮಂತಹ ಉತ್ತಮ ಸ್ತ್ರೀರತ್ನಗಳ ದರ್ಶನ ಲಾಭವು ದೊರೆಯಿತು ನಿಮ್ಮ ಆದರಾತಿಥ್ಯಗಳಿಗೆ ಪ್ರತ್ಯುಪಕಾರವನ್ನು ಯಾವ ರೀತಿಯಲ್ಲಿ ಮಾಡುವುವೆನ್ನುವುದೇ ಪ್ರಕೃತ ನಮ್ಮ ಚಿಂತೆಯಾಗಿದೆ.

**ಪ್ರತಾಪಸಿಂಹ**-ಈದಿನ ನಾವೆದ್ದ ಘಳಿಗೆಯು ಶುಭವಾದುದೆಂದು ಎಣಿಸುತ್ತೇನೆ. ನಮ್ಮ ಮಹಾರಾಜರ ಅದೃಷ್ಟವು ಈ ರಾಜಗೃಹವನ್ನು ದರ್ಶಿಸುವಂತೆ ಮಾಡಿತು.

**ಪದ್ಮಲತೆ**-ಇದು ಕನ್ಯಾಮಂದಿರವಾದುದರಿಂದ ಬಹಳ ಹೊತ್ತು ಇಲ್ಲಿದ್ದರೆ ಕೇಡು ಸಂಭವಿಸಬಹುದು. ಆದುದರಿಂದ ಜಾಗ್ರತೆ ದಯಮಾಡಿಸಬೇಕು.

ಪ್ರತಾಪಸಿಂಹನೂ ಸರ್ದಾರ್‌ಸಿಂಹನೂ ಒಬ್ಬರಮುಖವನ್ನೊಬ್ಬರು ನೋಡಲಾರಂಭಿಸಿದರು. ಆತುರಪಡುತ್ತಿರುವ ಪದ್ಮಲತೆಗೆ ಏನುತ್ತರ ಕೊಡುವುದು? ಮಾಡುವುದಿಂಥದೆಂದು ತಿಳಿಯದೆ ಇಬ್ಬರೂ ಎದ್ದರು ಸರ್ದಾರ್‌ಸಿಂಹನ ಕಣ್ಣುಗಳು ಯಾರನ್ನೋ ಹುಡುಕಲಾರಂಭಿಸಿದವು. ಮುಂದೆ ಹೆಜ್ಜೆಯಿಡಲಾರದೆ ತಪಿಸುತ್ತಿರುವುದನ್ನು ಕಂಡ ಪ್ರತಾಪಸಿಂಹನು ರಾಜಕುಮಾರನ ಕೈಗಳನ್ನು ಹಿಡಿದುಕೊಂಡು ಮೆಲ್ಲಗೆ ಕರೆದುಕೊಂಡು ಹೋಗಲು, ರಾಜಕುಮಾರನು ನಡೆಯಲಾರದೆ ತೂಗಾಡುತ್ತಿರುವುದನ್ನು ಕಂಡು, ಪ್ರತಾಪಸಿಂಹನು 'ಮಿತ್ರಾ, ಇದೇನು ಒಂದು ಬಗೆಯಾಗಿರುವೆ? ನಿನ್ನ ಸ್ಥಿತಿಯನ್ನು ನೋಡಿದಲ್ಲಿ ನಾನೀ ಗೃಹವನ್ನು ಬಿಟ್ಟು ಹೋಗುವುದು ಅಸಾಧ್ಯವೆಂದು ತೋರುವುದು' ಎಂದು ಹೇಳಿ ಪದ್ಮಲತೆಯ ಕಡೆ ತಿರುಗಿ ನೋಡಿದನು. ಆತನ ಇಂಗಿತವನ್ನರಿತ ಚತುರೆಯಾದ ಪದ್ಮಲತೆಯು 'ಇದೇನಾಶ್ಚರ್ಯ? ನೀವುಗಳು ಇನ್ನೂ ಇಲ್ಲಿಯೇ ಇರುವಿರಿ. ಈದಿನ ಸಾಯಂಕಾಲ ನಮ್ಮ ಮಹಾರಾಜನು ದೇವಾಲಯಕ್ಕೆ ದರ್ಶನಾರ್ಥವಾಗಿ ಬಂದು ತನ್ನ ಪುತ್ರಿಯ ಗೃಹದಲ್ಲಿ ರಾತ್ರಿಯನ್ನು ಕಳೆಯುವುದು ಪದ್ಧತಿ ನೀವಿಲ್ಲಿರುವ ವಿಷಯವು ತಿಳಿದರೆ ಮಹದನರ್ಥವುಂಟಾಗುವುದು. ಎಷ್ಟೇ ಪರಾಕ್ರಮಶಾಲಿಯಾಗಿದ್ದರೂ ಪರಗೃಹದಲ್ಲಿ ಒಂಟಿಯಾಗಿರುವುದು ಅಪಾಯಕರವು. ಪ್ರತಾಪಸಿಂಹಾ, ಆತನ ದೇಹಸ್ಥಿತಿಯು ಹೇಗಿರುವುದು? ಬಲವುಂಟಾಗಲು ನಾನೊಂದು ಔಷಧವನ್ನು ಕೊಡುತ್ತೇನೆ.' ಎಂದು ಹೇಳಿ ಒಂದು ಬಟ್ಟಲಿನಲ್ಲಿ ನಿರ್ಮಲೋದಕವನ್ನು ತುಂಬಿಕೊಡಲು, ಅದನ್ನವನು ತನ್ನ ಮಿತ್ರನಿಗೆ ಕುಡಿಸಲು ರಾಜಪುತ್ರನು

ಪೂರ್ವಬಲವನ್ನೂ, ಧೈರ್ಯವನ್ನೂ ತಳೆದು ಪದ್ಮಲತೆಯನ್ನು ನೋಡಿ, 'ಚತುರಿಕೇ, ನಿನ್ನ ಸಾಮರ್ಥ್ಯಕ್ಕೆ ಮೆಚ್ಚಿದೆನು. ನೀನು ಹೇಳುವುದು ಯುಕ್ತವೆ, ಆದರೂ ನಿನ್ನಿಂದ ಉಪಕಾರವನ್ನು ಕೂಡ ನಿರೀಕ್ಷಿಸಬಹುದಲ್ಲವೇ? ' ಎಂದನು.

ಇಷ್ಟರಲ್ಲಿಯೇ 'ಪದ್ಮಲತೇ' ಎಂದು ಯಾರೋ ಕೂಗಿದಂತಾಗಲು, 'ಸ್ವಲ್ಪ ತಡೆಯಿರಿ ಇದೋ ಬಂದೆ' ಎಂದು ಹೇಳುತ್ತಾ ಪದ್ಮಲತೆಯು ಹೊರಟು ಹೋದಳು ಸ್ವಲ್ಪ ಹೊತ್ತಿಗೆಲ್ಲಾ ಪದ್ಮಲತೆ--ಸುಖಲತೆಯರಿಬ್ಬರೂ ಆ ವಿನೋದ ಮಹಲನ್ನು ಪ್ರವೇಶಿಸಲು, ರಾಜಕುಮಾರನೂ ಅವನ ಮಿತ್ರನೂ ಆಸನಾರೂಢರಾಗಿರುವುದನ್ನು ಕಂಡು ಅಲ್ಲಿದ್ದ ಬೇರೆಆಸನಗಳಲ್ಲಿ ಇವರೂ ಕುಳಿತರು. ಸುಖಲತೆಯು ರಾಜಕುಮಾರನನ್ನು ಪ್ರಶ್ನಿಸಲುದ್ಯುಕ್ತಳಾದ ಸಮಯದಲ್ಲಿ 'ಇರಲಿ ಇರಲಿ. ಇವರನ್ನಿಷ್ಟಕ್ಕೇ ಬಿಡುತ್ತೇನೆಯೇ? ನನ್ನ ಸಾಮರ್ಥ್ಯವಾರಿಗುಂಟು ನೋಡೋಣ. ಅಪ್ಪಾ! ಈ ಸ್ತ್ರೀಯರಿಗಿಷ್ಟು ಧೈರ್ಯವೇ? ಇವರ ನಗಾಟವೇನು? ಹುಡುಗಾಟ? ಅವನೊಡನೆ ಇವಳಿಗೇನು ಮಾತು? ಇದನ್ನೆಲ್ಲಾ ನೋಡಿದರೆ ನನಗೆಷ್ಟು ಕೋಪ ಬರುತ್ತೆ! ನಾನಲ್ಲಿ ಹೋದರೆ ಮತ್ತೊಬ್ಬನು ತಡೆಯುತಾನೆ ಇದು ಯಾರಮನೆಯೆಂದು ತಿಳಿದಿದಾನೋ ಕಾಣೆ. ಇವರಪ್ಪನ ಮನೆಯೇನೋ? ದಾರಿಹೋಕನಾದ ಇವನಿಗೆ ನನ್ನನ್ನವರೋಧಿಸುವ ಸ್ವಾತಂತ್ರ್ಯವನ್ನು ಕೊಟ್ಟವರಾರು ? ನಾನೆಷ್ಟು ಶಾಸ್ತ್ರಗಳನ್ನು ಕಂಠಪಾಠ ಮಾಡಿದೇನೆ. ಸುಖಲತೆಗೆ ನಾನು ಕಲಿತಿರುವ ಪಾಠವನ್ನೆಲ್ಲಾ ಚಾಚೂ ಬಿಡದೆ ಒಪ್ಪಿಸಿದ್ದೇನೆ. ನನ್ನನ್ನು ಮದುವೆಯಾಗುತ್ತೇನೆಂದು ಅವಳು ಹೇಳಿದ್ದರಿಂದಲ್ಲವೇ ಇಷ್ಟು ಕಷ್ಟಗಳನ್ನೂ ನಾನು ಸಹಿಸಿದೆ ಎಷ್ಟೆಷ್ಟೋ ಕಷ್ಟಪಟ್ಟು ಪಾಠಗಳನ್ನು ಕಲಿತೆ. ಪದ್ಮಲತೆಯೂ ಅವಳೂ ಮೊದಲೆಲ್ಲಾ ನನ್ನನ್ನು ಹೊಡೆಯುತಿದ್ದರು. ಸ್ವಲ್ಪ ಹೊತ್ತಿನಿಂದ ನನ್ನ ತಂಟೆಗೂ ಯಾರೂ ಬರಲಿಲ್ಲ, ನನ್ನ ಪಾಠವನ್ನೂ ಕೇಳಲಿಲ್ಲ ನಾನು ಮಂಚದ ಕೆಳಗೆ ಬಚ್ಚಿಟ್ಟುಕೊಂಡಿದ್ದಾಗ 'ಪಿಸ ಪಿಸ' ವೆಂದು ಏನೋನೋ ಮಾತನಾಡಿಕೊಳ್ಳುತ್ತಿದ್ದರು. ಇದೇನು? ಆಗಲೇ ರಾಜಗೃಹದ ಬಾಗಿಲುಗಳು ಬಂಧಿಸಲ್ಪಟ್ಟಿರುವವು. ಎಷ್ಟು ತಟ್ಟಿದರೂ ಉತ್ತರಕೊಡುವರೇ ಗತಿಯಿಲ್ಲ ಎಷ್ಟುನಗು, ಏನುನಗು? ನನ್ನಿಂದ ಸಹಿಸುವುದಕ್ಕೇ ಆಗದು ಇನ್ನು ನಾನು ಸುಮ್ಮನಿರುತ್ತೇನೆಯೇ? ಬರುತ್ತೇನೆಂದು ಹೇಳಹೋದ ಆ ಪದ್ಮಳು ಇನ್ನೂ ಬರಲಿಲ್ಲ. ಲೇ! ಪದ್ಮ ಲತಾ, ಲತಾ-ಲತಾ, ಎಷ್ಟು ಕೂಗಿದರೂ ಉತ್ತರವಿಲ್ಲ ಲತೆಯು ಅವನ ಲತೆಯಾಯಿತೋ, ಅರಣ್ಯಲತೆಯಾಯಿತೋ? ಉತ್ತರ ಕೊಡುವೆಯೋ, ನೀನೇ ಬರುವಿಯೋ? ಅಥವಾ ನಾನೇ ಬರಲೋ? ಎಂದು ಆರ್ಭಟಿಸುತ್ತಾ ಮಾನಸಿಂಹನು ಮತ್ತೊಂದು ಬಾಗಿಲಿನಿಂದ ಆ ಕನ್ಯಾ ಮಂದಿ

ರವನ್ನು ಪ್ರವೇಶಿಸಿ ರಾಜಪುತ್ರಿಯೂ, ರಾಜಪುತ್ರನೂ ಸಂಭಾಷಿಸುತ್ತಿದ್ದ ವಿನೋದ ಮಹಲಿಗೆ ಬಂದು ರಾಜಪುತ್ರಿಯೆದುರಿನಲ್ಲಿ ನಿಂತನು.

ಸರ್ದಾರ್ ಸಿಂಹನು ತನ್ನ ದೇಶದ ವರ್ತಮಾನಗಳನ್ನು ವಿವರಿಸುತ್ತಿದ್ದನು. ಒಂದೊಂದು ಸಲ ಪ್ರತಾಪನೂ ಮಧ್ಯೆ ಮಧ್ಯೆ ಮಾತನಾಡುವನು. ಚತುರೆಯಾದ ಪದ್ಮಲತೆಯು ಅರಮನೆಯನ್ನು ಯಾರೂ ಪ್ರವೇಶಿಸದಂತೆ ಪಹರೆ ಕೊಡುತ್ತಿದ್ದಳು. ಮಾನಸಿಂಹನ ಮೌಢ್ಯರಸವು ಕ್ಷಣಕ್ಷಣಕ್ಕೂ ಹೆಚ್ಚುತಿದ್ದಿತು. ಪದ್ಮಲತೆಯು ಎಷ್ಟು ಸಮಾಧಾನ ಹೇಳಿದರೂ ಅವನು ಕೇಳಲಿಲ್ಲ. ನಿಟ್ಟುಸಿರುಬಿಡುತ್ತಾ 'ಅಯ್ಯೋ! ನನ್ನ ಪ್ರಾಣ ಹೋಗುತ್ತದಲ್ಲಾ' ಎಂದು ಆರ್ಭಟಿಸುತ್ತಿರುವುದನ್ನು ಕಂಡ ಸುಖಲತೆಯು ಅವನನ್ನು ಹೊರಗೆ ಕಳುಹಿಸಿ ಬರುವಂತೆ ಪದ್ಮಲತೆಗೆ ಹೇಳಿದಳು.

ಪದ್ಮಲತೆಯು ಉಕ್ಕಿಬರುತ್ತಿರುವ ನಗುವನ್ನಡಗಿಸಿಕೊಂಡು "ಮಾನಸಿಂಹ, ನಿನ್ನ ಮತ್ತು ರಾಜಕುಮಾರಿಯ ವಿವಾಹವನ್ನುದ್ದೇಶಿಸಿಯೇ ಅವರೆಲ್ಲರೂ ಇಲ್ಲಿಗೆಬಂದಿರುವರು. ಲಗ್ನ ನಿಶ್ಚಯಮಾಡುತ್ತಿರುವ ಸಮಯಕ್ಕೆ ಸರಿಯಾಗಿ ನೀನು ಬಂದೆ" ಎನಲು, ಆ ಮಂದಮತಿಯಾದ ಮಾನಸಿಂಹನು ಪರಮಾಹ್ಲಾದಭರಿತನಾದನು. 'ಹಾಗಾದರೆ ನನ್ನ ವಿವಾಹವು ನಿಶ್ಚಯವಾದ ಹಾಗೆಯೇ? ಇವರೆಲ್ಲರೂ ನನ್ನ ವಿವಾಹ ಕಾಲದಲ್ಲಿ ಇಲ್ಲಿಯೇ ಇರುತ್ತಾರೆಯೇ? ಯಾವಾಗ ಮದುವೆ ? ನಾನೀಗಲೇ ಹೋಗಿ ಸುಖಲತೆಯ ಪಕ್ಕದಲ್ಲಿ ಕುಳಿತುಕೊಳ್ಳುತ್ತೇನೆ' ಎಂದು ಹೇಳಿ ಪದ್ಮಲತೆಯು ತಡೆಯುತ್ತಿರುವುದನ್ನೂ ಲಕ್ಷ್ಯಮಾಡದೆ ಓಡಲುದ್ಯುಕ್ತನಾದನು. ಪದ್ಮಲತೆಯು ಬೇಸತ್ತು 'ಇದೊಳ್ಳೆಯ ಕಾಟವಾಯಿತಲ್ಲಾ, ಈ ಮೂರ್ಖನನ್ನು ಕಟ್ಟಿಕೊಂಡಳುವುದು ಬಹಳ ಕಷ್ಟಕ್ಕೆ ಬಂತು! ಏನಾದರೊಂದು ಯುಕ್ತಿಮಾಡಿದ ಹೊರತು ಇವನೀ ಸ್ಥಳವನ್ನು ಬಿಟ್ಟು ಹೋಗಲಾರನು' ಎಂದು ಚಿಂತಿಸಿ, ಆ ಮೂರ್ಖನನ್ನು ಕುರಿತು–'ಮಾನಸಿಂಹ, ಈ ದಿನ ವಿವಾಹದ ಉದ್ದಿಶ್ಯವಾಗಿ ನಿನ್ನ ಜಾತಕವನ್ನು ನೋಡಿದ್ದರಲ್ಲಿ ನೀನು ಸತ್ತು ಹೋಗಿರುವುದಾಗಿ ಕಂಡುಬರುತ್ತಿದೆ. ನಿಜವೇ, ಸುಳ್ಳೇ ಎಂದು ಮನೆಯಹಿಂಭಾಗದ ಗೋಡೆಯಲ್ಲಿರುವ ಹಲ್ಲಿಯನ್ನು ಕೇಳಿ ಬಾ, ಬೇಗ ಹೋಗು'' ಎಂದಳು. ಇದನ್ನು ಕೇಳಿದ ಮೂಢನು ಭೀತನಾಗಿ 'ಅಯ್ಯೋ ! ನಾನು ನಿಜವಾಗಿಯೂ ಸತ್ತುಹೋದೆನೇ ? ಇನ್ನೇನು ಗತಿ ? ಸುಖಲತೆಯನ್ನು ಯಾರಾದರೂ ಮದುವೆಯಾದರೆ ಅದನ್ನು ನಾನು ಹೇಗೆ ಸಹಿಸಲಿ? ' ಎಂದು ಬೀಳುವುದೇಳುವುದನ್ನೂ ಲಕ್ಷ್ಯಮಾಡದೆ, ಒಂದೇ ಉಸಿರಿಗೆ ಓಡಿ ಮನೆಯ ಹಿಂಭಾಗದಲ್ಲೆಲ್ಲಾ ಹುಡುಕಿದರೂ ಎಲ್ಲಿಯೂ ಹಲ್ಲಿಯೂ ಸಿಕ್ಕಲಿಲ್ಲ

ವಾದ್ದರಿಂದ ಮತ್ತೆ ಪದ್ಮಲತೆಯ ಬಳಿ ಓಡಿಬಂದು-'ಎಲ್ಲಿಯೂ ಒಂದು ಹಲ್ಲಿಕೂಡ ಇಲ್ಲ' ಎಂದು ಅಳುವುದಕ್ಕೆ ಮೊದಲುಮಾಡಿದನು. ಪದ್ಮಲತೆಯು ಅವನನ್ನು ಸಂತೈಸಿ—'ಮಾನಸಿಂಹ, ಯಾವ ಪ್ರಪಂಚ ಮುಳುಗಿತೆಂದು ಇಷ್ಟು ಅಳುತ್ತೀ ? ಹಲ್ಲಿ ಇಲ್ಲದಿದ್ದರೆ ಅಷ್ಟೇ ಹೋಯಿತು; ತೋಟದಲ್ಲಿರುವ ನಾಯಿಯನ್ನು ಕೇಳಿಬಾ ಎನಲು, ಅವನು ತೋಟದಲ್ಲಿ ಮಲಗಿದ್ದ ನಾಯನ್ನು ಕಂಡು—'ಎಲೈ ಶ್ವಾನವೇ, ನಾನು ಸತ್ತದ್ದು ನಿಜವೇನು ?' ಎಂದು ಕೇಳಲು, ಅದು ಮಲಗಿದ್ದುದನ್ನು ಎಬ್ಬಿಸಿದ ಸಿಟ್ಟಿಗಾಗಿ ಗುರ್ರೆಂದು ಗುರುಗುಟ್ಟುತ್ತಾ ಬಗಳಲಾರಂಭಿಸಿತು. ಅದನ್ನು ಕೇಳಿದ ಮಾನಸಿಂಹನು ಮತ್ತಿಷ್ಟು ಘಟ್ಟಿಯಾಗಿ ಅಳುತ್ತಾ ಓಡಿಬರಲು, ಅದನ್ನು ಕಂಡ ಸುಖಲತೆ, ಪದ್ಮಲತೆ ಮೊದಲಾದವರು ಏನೆಂದು ವಿಚಾರಿಸಲು, ಮೂಢನು ಅಳುತ್ತಾ ತಾನು ಸತ್ತದ್ದು ನಿಜವೆಂದು ನಾಯಿಯು ಹೇಳಿದ್ದಾಗಿಯೂ, ತಾನು ಸತ್ತದ್ದಕ್ಕೆ ನಾಯಿಯು ಬಹಳ ಅತ್ತದ್ದಾಗಿಯೂ ಹೇಳಲು, ಎಲ್ಲರೂ ಘೊಲ್ಲೆಂದು ನಕ್ಕರು ಆಗ ಪದ್ಮಲತೆಯು ಪರಿತಾಪದಿಂದ-'ತಮ್ಮಾ, ಎಂಜಲುತಿನ್ನುವ ನಾಯನ್ನು ಕೇಳಿದ್ದರಿಂದ ಅದು ಅತ್ತಿತು. ಹಿಂಭಾಗದಲ್ಲಿರುವ ಕೋತಿಯನ್ನು ಕೇಳು, ಅದು ಸರಿಯಾದ ಉತ್ತರ ಕೊಡುವುದು ಎಂದು ಹೇಳಿದಳು.

ಮೊದಲಿನಂತೆಯೇ ಹೋಗಿ ತಾನು ಸತ್ತಿರುವೆನೋ, ಬದುಕಿರುವೆನೋ ಎಂದು ಮರದಿಂದ ಮರಕ್ಕೆ ನೆಗೆಯುತ್ತಿದ್ದ ಮಂಗನನ್ನು ಕೇಳಲು, ಅದು ಹಲ್ಲುಕಿರಿದು ಕಾಲನ್ನು ಮೇಲಕ್ಕೆತ್ತಿ ಅಲ್ಲಿಂದಿಲ್ಲಿಗೆ ನೆಗೆಯುತ್ತಿತ್ತು. ತಾನು ಕೇಳಿದ್ದಕ್ಕೆ ಸರಿಯಾದ ಜವಾಬು ಕೊಡಲಿಲ್ಲವೆನ್ನುವ ಸಿಟ್ಟಿನಿಂದ ಅದರ ಮೇಲೊಂದು ಕಲ್ಲನ್ನೆಸೆಯಲು ಅದು ಸಿಟ್ಟಿನಿಂದ ಮಾನಸಿಂಹನನ್ನಟ್ಟಿಸಿಕೊಂಡುಬಂದು ಕೂದಲು ಹಿಡಿದೆಳೆದು ಕಚ್ಚಿ ರಕ್ತ ಕೆಲೆಗಳುಂಟಾಗುವಂತೆಮಾಡಿತು. ಅದರಿಂದ ತಪ್ಪಿಸಿಕೊಂಡುಬರುವವೇಳೆಗೆ ಮಾನಸಿಂಹನ ಜೀವ ಹೋಯಿತೆಂದೇ ಹೇಳಬೇಕು. ಮಂಗನೂ ಸಿಟ್ಟಿನಿಂದ ಗುರುಗುಟ್ಟುತ್ತಿತ್ತು. ಮುಖದಲ್ಲಿ ರಕ್ತಸೋರುತ್ತಿರಲು, ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿರಲು ಓಡಿಬಂದು ಅಳುತ್ತಾ ನಿಂತಿರುವುದನ್ನು ಕಂಡ ಪದ್ಮಲತೆಯು ಪರಿತಾಪಗೊಂಡು ಅವನನ್ನು ಸಮಾಧಾನಗೊಳಿಸಿ-'ಇನ್ನು ನೀನಲ್ಲಿಗೆ ಹೋಗಬೇಡ. ಇಲ್ಲಿ ಬಂದಿರುವವರಿಗೆ ಬೀಸುತ್ತಿರು. ಹೀಗೆ ಸೇವೆಮಾಡಿದರೆ ನಿನಗೆ ಸಾವಿಲ್ಲವೆಂದು ಜಾತಕದಲ್ಲಿ ಹೇಳಿದೆ' ಎಂದು ಹೇಳಿದ್ದನ್ನು ಕೇಳಿದ ಮಾನಸಿಂಹನಿಗೆ ತಾನು ಪಟ್ಟ ಕಷ್ಟವೆಲ್ಲವೂ ಮರೆತುಹೋಯಿತು. ಸರ್ದಾರ್ ಸಿಂಹನ ಪಾದಗಳನ್ನೊತ್ತುತ್ತಾ ಮಧ್ಯೆ ಮಧ್ಯೆ 'ನನಗೆ ಸಾವಿಲ್ಲವೇ?' ಎಂದು ಕೇಳುವನು. 'ನೋಯುವುದಲ್ಲಾ' ಎಂಥಳುವನು. ಈನರಮ್ಮಗ

ವನ್ನು ಕಂಡು ಯಾರುತಾನೇ ನಗದೇ ಇರುವರು! ಸುಖಲತೆಯೂ ಪದ್ಮಲತೆಯೂ ಅವನನ್ನು ನಾನಾಬಗೆಯಿಂದ ಸಮಾಧಾನಗೊಳಿಸಲು ಮಾನಸಿಂಹನಿಗುಂಟಾದ ಆನಂದಕ್ಕೆ ಪಾರವೇ ಇಲ್ಲ. ಮೂಢನ ಮತಿಭ್ರಮೆಯು ನೀಗಲೇ ಇಲ್ಲ.

---

## ೭ನೆಯ ಅಧ್ಯಾಯ.

---

### ವಿವಾದ.



ಸ್ನಾನಾರ್ಥವಾಗಿ ನದಿಗೆತೆರಳಿದ ಅರಸನೂ, ಮಂತ್ರಿಯೂ ಬಹಳ ಹೊತ್ತಾದರೂ ತಿರುಗಿ ಬಾರದಿದ್ದುದನ್ನು ಕಂಡ ಸೈನಿಕರು ಎಲ್ಲೆಲ್ಲಿಯೂ ಹುಡುಕಲಾರಂಭಿಸಿದರು. ನದಿಯಲ್ಲಿ ಯಾರೂ ಇಲ್ಲ. 'ಮಹಾರಾಜರು ಎಲ್ಲಿ ಹೋಗಿರಬಹುದು' ಎಂಬುದನ್ನು ಎಷ್ಟು ಯೋಚಿಸಿದರೂ ಬಗೆ ಹರಿಯಲಿಲ್ಲ. ಕಾಡು, ಗುಡ್ಡ, ತೋಟ, ವನ, ದೇವಾಲಯ, ಹಳ್ಳಿ, ಪಟ್ಟಣ-ಎಲ್ಲೆಲ್ಲಿ ಹುಡುಕಿದರೂ ರಾಜಮಂತ್ರಿಯರಿರುವ ಸ್ಥಳವು ತಿಳಿಯಲಿಲ್ಲವಾದ್ದರಿಂದ ಆ ಅರಣ್ಯವನ್ನೆಲ್ಲಾ ಅಲ್ಲೋಲ ಕಲ್ಲೋಲ ಮಾಡುತ್ತಿದ್ದರು.

ಎಲ್ಲಿಂದಲೋ ಕೆಲವು ಜನ ಸೈನಿಕರು ಬಂದು ಸರ್ದಾರ್ ಸಿಂಹನ ಸೈನಿಕರನ್ನು ಕಂಡು ಕೋಪಭರಿತರಾಗಿ ಜಗಳವಾಡಲಾರಂಭಿಸಿದರು. ಕಾರಣವಿಲ್ಲದೆ ಎರಡು ಕಡೆಯ ಸೈನಿಕರೂ ಜಗಳವಾಡುವುದನ್ನು ಕಂಡ ಪುರಜನರು ಭೀತಿಯಿಂದ ತಮ್ಮ ರಾಜನ ಬಳಿಗೆ ಹೋಗಿ ಮೊರೆಯಿಡಲು, ರಾಜನು ವೀರಾವೇಶದಿಂದ ಸೈನ್ಯ ಸಮೇತನಾಗಿ ಅಜ್ಮೀರಿಗೆ ಬಂದನು. ಜಗಳದಲ್ಲಿ ಮರಣ ಹೊಂದಿದವರ ಸಂಖ್ಯೆಯೊಂದು ಕಡೆ ಇರಲಿ. ಸರ್ದಾರ್ ಸಿಂಹ, ಪ್ರತಾಪಸಿಂಹ, ಸುಖಲತೆ, ಪದ್ಮಲತೆ ಇವರುಗಳ ಗತಿಯೇನಾಯಿತೆನ್ನುವುದನ್ನು ಸ್ವಲ್ಪ ನೋಡೋಣ.

ಹೊರಗಿನ ಕೋಲಾಹಲ ಶಬ್ದವು ಕಿವಿಗೆ ಬೀಳುತ್ತಲೇ ವಿವೇಕವತಿಯಾದ ಪದ್ಮಲತೆಯು ಮಹಡಿಯನ್ನೇರಿ ನೋಡಲು ಅಸಂಖ್ಯಾತವಾದ ಸೈನ್ಯಗಳು ಒಂದಕ್ಕೊಂದು ಹೊಡೆದಾಡುವುದನ್ನೂ, ಅಧಿಕಾರಿಗಳ ಅಪ್ಪಣೆಯನ್ನೂ, ಹಾಹಾಕಾರವನ್ನೂ, ಘರ್ಜನೆಯನ್ನೂ ಕೇಳಿ-"ಅಯ್ಯೋ! ಮೋಸವಾಯಿತು. ಈಗ ಅಮರಸಿಂಹನು

ಇಲ್ಲಿ ಬಂದುದಾದರೆ ಸರ್ದಾರ್‌ಸಿಂಹನ ಗತಿಯೇನಾಗುವುದೋ? ಸರ್ದಾರ್ ಸಿಂಹನ ಗತಿ ಹಾಗಿರಲಿ. ಸುಖಲತೆಯ ಗತಿಯೇನಾಗುವುದೋ? ಇರಲಿ. ಈ ವಿಷಮಸ್ಥಮಯ ದಲ್ಲಿ ಇವುಗಳನ್ನೆಲ್ಲಾ ಯೋಚಿಸುತ್ತ ಕುಳಿತುಕೊಳ್ಳುವುದರಲ್ಲಿ ಪ್ರಯೋಜನವಿಲ್ಲ. ಮೊದಲು ಈ ಸರಸ್ವತೀ ಸದನದ ಕೋಟೆಯೊಳಕ್ಕೆ ಯಾರೂ ಪ್ರವೇಶಿಸದಂತೆ ಬಾಗಿ ಲನ್ನು ಭದ್ರಪಡಿಸುವುದು ಅತ್ಯಾವಶ್ಯಕವು. ತರುವಾಯ ನಿರಾಯಾಸವಾಗಿ ಕೋಟೆ ಯೊಳಗಿರುವವರಿಗೆ ಕಷ್ಟತಪ್ಪುವಂತೆಮಾಡಬಹುದು. ದುರ್ಗದ ಬಾಗಿಲನ್ನು ಬಂಧಿಸಲು ಮೂಢಶಿಖಾಮಣಿಯಾದ ಮಾನಸಿಂಹನ ಸಹಾಯವು ಅತ್ಯಾವಶ್ಯಕವಾಗಿ ಬೇಕಾಗಿ ರುವುದು. ಅವನಿಗೆ ವಿವಾಹದ ಆಸೆ ತೋರಿಸಿ, ವಶಪಡಿಸಿಕೊಳ್ಳಬೇಕು'' ಎಂದು ತೀರ್ಮಾನಿಸಿದವಳಾಗಿ ಮಹಡಿಯಿಂದ ಕೆಳಗಿಳಿದಳು. ಪದ್ಮಲತೆಯ ಮುಖವು ಬಾಡಿ ರುವುದನ್ನು ಕಂಡ ಸುಖಲತೆಯು—'ತಂಗೀ, ಅದೇಕೆ! ನೀನಿಷ್ಟು ಖಿನ್ನಳಾಗಿರುವೆ ? ಕಾರಣವನ್ನು ನನಗೆ ತಿಳಿಸು' ಎನ್ನಲು, ಪದ್ಮಲತೆಯು—ಸುಖಲತೆ, ಘಟ್ಟಿಯಾಗಿ ಮಾತನಾಡಬೇಡ, ಸರ್ವನಾಶ ಒದಗಿತು ಈಗ ನಾವು ಬದುಕುವುದು ದುಸ್ಸಹವಾಗಿ ರುವುದು. ಮೊದಲು ಸರ್ದಾರ್‌ಸಿಂಹ ಮಹಾರಾಜರನ್ನು ರಕ್ಷಿಸುವ ಪ್ರಯತ್ನ ಮಾಡು. ಅಷ್ಟರಲ್ಲಿ ನಾನು ಕೋಟೆಯ ಬಾಗಿಲನ್ನು ಮುಚ್ಚಿಬರುವೆನು. ಈ ಅರ ಮನೆಗೆ ಒಂದು ಕಳ್ಳದಾರಿಯಿರುವುದು ಮೊದಲು ರಾಜಕುಮಾರನೂ, ಮಂತ್ರಿ ಯೂ ಆ ಗುಪ್ತಮಾರ್ಗವಾಗಿ ತಪ್ಪಿಸಿಕೊಂಡು ಹೋಗುವ ಉಪಾಯವನ್ನು ಹುಡುಕು. ಉಳಿದ ವಿಷಯುಗಳನ್ನು ಆಮೇಲೆ ಯೋಚಿಸೋಣ. ಮಾನಸಿಂಹನನ್ನು ನನ್ನೊಡನೆ ಕರೆದುಕೊಂಡು ಹೋಗುತ್ತೇನೆ. ಅವನಿಲ್ಲಿದ್ದರೆ ಇಲ್ಲಿ ನಡೆಯುವ ವಿಷಯುಗಳನ್ನು ಗ್ರಹಿಸಲವಕಾಶವಾಗುವುದು. ರಾಜಕುಮಾರನ ಮಾನರಕ್ಷಣೆಗಾಗಿ ಪ್ರಾಣತ್ಯಾಗಮಾಡಲು ಕೂಡ ಹಿಂಜರಿಯಬೇಡ, ಜಾಗ್ರತೆ' ಎಂದು ಹೇಳಿ—'ಮಾನ ಸಿಂಹ, ಜಾಗ್ರತೆ ಓಡಿಬಾ, ಸುಖಲತೆಗೂ, ನಿನಗೂ ವಿವಾಹ ಮಾಡಿಸುತ್ತೇನೆ. ದೇವ ಸ್ಥಾನಕ್ಕೆ ಹೋಗೋಣ. ಅಲ್ಲಿ ಪುರೋಹಿತರೂ, ಮುತ್ತೈದೆಯರೂ ಸಿದ್ಧರಾಗಿರುವರು' ಎಂದು ಹೇಳಿ ಅವನ ಉತ್ತರನಿರೀಕ್ಷಣೆಮಾಡದೆಯೇ ಸರಸರನೆ ಕೈ ಹಿಡಿದೆಳೆದುಕೊಂ ಡು ಹೊರಟುಹೋದಳು.

ಪದ್ಮಲತೆಯ ಮಾತುಗಳನ್ನು ಕೇಳಿದ ಸುಖಲತೆಯು ಭ್ರಮಿಸಿ, ಹಾಗೆಯೇ ಮಾತಿಲ್ಲದೆ ಇರಲು ಪುರುಷಸಿಂಹವಾದ ಸರ್ದಾರ್‌ಸಿಂಹನು ಧೈರ್ಯದಿಂದೆದ್ದು-ಮಾನಿನೀ, ಚಿಂತಿಸುವೆಯೇಕೆ? ನಿನಗೆ ತಕ್ಕ ರಾಜಪುತ್ರನು ನಾನೇ, ನಿನ್ನನ್ನು ಯಾವಾಗಲೂ

ವ್ಲುರೆಯೆನು. ವಳಗೆ ಹೊರಟುಹೋಗಲು ಮಾರ್ಗತೋರಿಸಿದೆಯಾದರೆ ಪರಾಕ್ರಮ ದಿಂದ ಬಹಿರಂಗವಾಗಿ ನಿಂತು ಯುದ್ಧಮಾಡಿ, ನಿನ್ನನ್ನು ರಕ್ಷಿಸಿ ನಿನ್ನ ತಂದೆಯ ಅಪ್ಪಣೆಯಂತೆ ಆತನ ಆಶೀರ್ವಾದವನ್ನು ಪಡೆದು, ನಿನ್ನನ್ನು ವಿವಾಹವಾಗುವೆನು. ರಾಜಪುತ್ರವಂಶದಲ್ಲಿ ಅನೇಕರು ಈರೀತಿ ಮಾಡಿರುವರು. ನಿನ್ನ ತಂದೆಯು ಅನು ಮತಿಯನ್ನೀಯದ ಪಕ್ಷದಲ್ಲಿ ನಿನ್ನನ್ನು ನನ್ನೊಡನೆ ನನ್ನ ರಾಜ್ಯಕ್ಕೆ ಕರೆದುಕೊಂಡು ಹೋಗಿ ಮಂತ್ರಿಪುರಜನರ ಸಮ್ಮುಖದಲ್ಲಿ ಶಾಸ್ತ್ರರೀತಿಯಾಗಿ ವಿವಾಹವಾಗುವೆನು. ಅದೂ ಸಾಧ್ಯವಿಲ್ಲದ ಪಕ್ಷದಲ್ಲಿ ಗಾಂಧರ್ವ ರೀತಿಯಲ್ಲಾದರೂ ವಿವಾಹವಾಗುವೆನು. ಭೀತಿಯನ್ನು ಬಿಡು; ನಾನು ಸಂಕಟಕ್ಕೆ ಸಿಕ್ಕಿರುವುದರಿಂದ ಈ ರೀತಿ ಮಾತನಾಡುತ್ತೇ ನೆಂದು ತಿಳಿಯಬೇಡ. ಕಾಮಿನೀಮಣಿ, ನಿನಗೆ ಸಮ್ಮತವಿದ್ದ ಪಕ್ಷದಲ್ಲಿ ಇಲ್ಲಿದ್ದುಕೊಂ ಡೇ ನಾನು ಶತ್ರುಗಳೊಡನೆ ಕಾದುವೆನು. ನಿನ್ನಿಷ್ಟವನ್ನು ಮರೆಮಾಜದೆ ಹೇಳು' ಎಂದನು-

ಬಹಳ ಹೊತ್ತು ಸುಮ್ಮನಿದ್ದ ಸುಖಲತೆಯು, "ರಾಜೇಂದ್ರ, ರಾಜಕುಮಾರಿ ಯೊಬ್ಬಳ ಮಂದಿರವನ್ನು ಪ್ರವೇಶಿಸಿದ ತಾವು ಪ್ರಾಣಾಪಾಯವಿಲ್ಲದೆ, ಅವಮಾನ ಹೊಂದದೆ ತಪ್ಪಿಸಿಕೊಂಡು ಹೋಗುವ ಮಾರ್ಗವನ್ನು ಮೊದಲು ನೋಡಿಕೊಂಡರೆ ವಿವಾಹದ ವಿಷಯವಾಗಿ ಆಮೇಲೆ ಯೋಚಿಸಬಹುದು. ಈ ಸುರಂಗದ ಮಾರ್ಗವನ್ನು ನಾನು ಬಲ್ಲೆನು. ಮೊದಲು ನಾನು ಹೋಗುವೆನು, ನನ್ನನ್ನನುಸರಿಸಿ ನೀವಿಬ್ಬರೂ ಬರಬಹುದು" ಎಂದಳು.

ಸರ್ದಾರ್‌ಸಿಂಹ—ನಾರೀಮಣೀ, ನೀನು ಮೊದಲು ಸುರಂಗದೊಳಕ್ಕೆ ಹೋ ದರೆ ಹಿಂತಿರುಗುವುದು ಕಷ್ಟವಾದದ್ದರಿಂದ ನಾನು ಮೊದಲು ಹೋಗುತ್ತೇನೆ. ಪ್ರತಾಪ ಸಿಂಹನು ನನ್ನ ಹಿಂದೆ ಬರಲಿ, ನೀನು ಬಾಗಿಲನ್ನು ಭದ್ರಪಡಿಸಿಕೊಂಡು ಹೋಗು.

ಪ್ರತಾಪಸಿಂಹನೂ ಇದೇ ಸರಿಯಾದ ಯೋಚನೆಯೆಂದು ಹೇಳಲು, ಸುಖ ಲತೆಯು ಸುರಂಗದ ಬಾಗಿಲನ್ನು ತೆರೆಯುವಷ್ಟರಲ್ಲಿಯೇ 'ಸುಖಲತಾ, ಸುಖಲತಾ, ತಂದೆ ಬಂದರು—ಜಾಗ್ರತೆ' ಎಂದು ಪದ್ಮಲತೆಯು ಕೂಗುತ್ತಾ ಓಡಿಬಂದಳು.

ಪದ್ಮಲತೆಯ ಮಾತನ್ನು ಕೇಳಿದವರೆಲ್ಲರ ಕೈಕಾಲುಗಳು ನಡುಗಲಾರಂಭಿಸಿದವು. ಹೇಗೋ ಧೈರ್ಯವನ್ನು ತಂದುಕೊಂಡು ಸುರಂಗದ ಬಾಗಿಲನ್ನು ತೆರೆದರು.

ಹೊರಡುವಾಗ ಸರ್ದಾರ್‌ಸಿಂಹನು 'ರಾಜಪುತ್ರೀ, ಹೋಗಿಬರುತ್ತೇನೆ, ಮರೆಯ ಬೇಡ' ಎನಲು, ಸುಖಲತೆಯು 'ಆರ್ಯಪುತ್ರ, ಈ ಜನ್ಮದಲ್ಲಿ ಪುನಃ ತಮ್ಮ ದರ್ಶನ

ವಾಗುವಂತೆ ನನಗೆ ತೋರಲಿಲ್ಲ' ಎನ್ನುವಷ್ಟರಲ್ಲಿಯೇ 'ಶಬ್ದ ಮಾಡದೆ ಹೊರಡಿ, ಹೊತ್ತಾಯಿತು' ಎಂದು ಪದ್ಮಲತೆಯು ಗದರಿಸಿದಳು.

ರಾಜಪುತ್ರನೂ, ಅವನ ಮಿತ್ರನೂ ಹೊರಟುಹೋದ ನಂತರ ಸುರಂಗದ ಬಾಗಿಲು ಮುಚ್ಚಲ್ಪಟ್ಟಿತು. ಇಷ್ಟರಲ್ಲೇ ಅಮರಸಿಂಹನು ಕೋಪದಿಂದ ಕಣ್ಣುಗಳಲ್ಲಿ ಕಿಡಿಗಳನ್ನುದುರಿಸುತ್ತ 'ಸುಖಲತಾ, ಎಲ್ಲಿರುವೆ' ಎಂದು ಕೇಳುತ್ತಾ ಒಳಕ್ಕೆ ಬಂದನು. ತಂದೆಯು ಬಂದುದನ್ನು ಕಂಡ ಕುಮಾರಿಯು 'ಅಪ್ಪಾ, ತಾವು ಯಾವಾಗ ಬಂದಿರಿ' ಎಂದು ಕೇಳುತ್ತಾ ನಮಸ್ಕರಿಸಿದಳು. 'ನಿನ್ನ ನಮಸ್ಕಾರ ಸಾಕು. ನಿನ್ನ ಕಳ್ಳ ಪುರುಷನೆಲ್ಲಿ? ಅವನನ್ನು ತೋರಿಸು, ಚಿತ್ರವಧೆ ಮಾಡುವೆನು. ಮಂಜುಳೆಯು ಹೇಳಿದ್ದು ನಿಶ್ಚಯವಾಯಿತು. ಇಲ್ಲಿ ಬಂದಿದ್ದವರಾರು? ಅವನನ್ನೆಲ್ಲಿ ಮುಚ್ಚಿಟ್ಟಿರುವೆ, ಹೇಳು' ಎಂದು ಘರ್ಜಿಸಿದನು. ತಂದೆಯ ಕೋಪದ ಘರ್ಜನೆಯನ್ನು ಕೇಳಿದ ರಾಜಕುಮಾರಿಯು ಜೀವಶವವಾದಳು. 'ಇಲ್ಲಿಯಾರೂ ಇಲ್ಲವಲ್ಲ' ಎಂದು ಹೇಳಲು ಪ್ರಾರಂಭ ಮಾಡುವಷ್ಟರಲ್ಲಿಯೇ ಅಮರಸಿಂಹನು ಮಗಳ ಕೆನ್ನೆಗೆ ಬಲವಾದ ಒಂದೇಟು ಕೊಡಲು ಬಿರುಗಾಳಿಯಿಂದ ನೆಲಕ್ಕುರುಳಿದ ಬಾಳೆಯ ಗಿಡದಂತೆ ಅಂಗನೆಯು ಮೂರ್ಛಿತಳಾಗಿ ಕೆಳಗೆ ಬಿದ್ದಳು. ಸಮೀಪದಲ್ಲಿದ್ದ ಪದ್ಮಲತೆಯು ಅವಳಿಗೆ ಶೈತ್ಯೋಪಚಾರ ಮಾಡುವುದಕ್ಕೆ ಹೋಗಲು ಅಮರಸಿಂಹನು ಅವಳ ತಲೆಕೂದಲನ್ನು ಹಿಡಿದೆಳೆದು 'ದುಷ್ಟೇ, ನಿನ್ನಿಂದಲ್ಲವೇ ನನ್ನ ಪುತ್ರಿಯು ಕೆಟ್ಟಳು? ಛೀ! ನಿನ್ನ ಮುಖವನ್ನು ನನಗೆ ತೋರಿಸಬೇಡ. ನಿಮ್ಮಿಬ್ಬರಿಗೂ ತಕ್ಕ ಶಿಕ್ಷೆ ವಿಧಿಸುವೆನು' ಎಂದು ಹೇಳಿ, ಅವಳ ಕೆನ್ನೆಗೂ ಒಂದೇಟು ಕೊಡಲು ಅವಳೂ ಜ್ಞಾನಶೂನ್ಯಳಾಗಿ ನೆಲಕ್ಕುರುಳಿದಳು. 'ಅಯ್ಯೋ! ಭಾವಾ, ನನ್ನ ಪತ್ನಿಯನ್ನು ಕೊಂದಿರಲ್ಲಾ' ಎಂದು ಮಂದಮತಿಯಾದ ಮಾನಸಿಂಹನು ಕೇಳಲು, ಕೈಯಲ್ಲಿದ್ದ ಚಾಟಿಯಿಂದ ಅವನ ಬೆನ್ನಿನಮೇಲೆ ಹೊಡೆಯಲು ಅವನು ಬಾಯಿಮುಚ್ಚಿಕೊಂಡನು.



## ೮ನೆಯ ಅಧ್ಯಾಯ.

### ಅಂಗನೆಯು ಮರೆಯಾಗುವಿಕೆ.



ಸುರಂಗ ಮಾರ್ಗವಾಗಿ ಹೋದ ರಾಜಪುತ್ರನೂ, ಅವನ ಗೆಳೆಯನೂ ಕಲ್ಲುಮುಳ್ಳುಗಳು ಕಾಲುಗಳನ್ನು ಘಾಯಪಡಿಸಿ ನೋವುಂಟು ಮಾಡಲು, ತಲೆಯೆತ್ತಲಾರದಂತೆ ಗೋಡೆಯು ತಾಕಲು, ದಾರಿ ತಿಳಿಯದೆ ಬಹಳ ಕಷ್ಟಪಟ್ಟವರಾಗಿ, ಕೊನೆಗೆ ಸ್ವಲ್ಪ ಬೆಳಕು ಕಣ್ಣಿಗೆ ಕಾಣಲು ಆನಂದಿತರಾಗಿ ಬಹಳ ಕಷ್ಟದಿಂದ ಹೊರಗೆ ಬಂದರು. ಸುರಂಗದ ಮಾರ್ಗವು ಸುಮಾರು ಆರು ಮೈಲಿಗಳಷ್ಟು ಇರಬಹುದು. ಸುತ್ತಿಸುತ್ತಿ ಸುರಂಗವಿದ್ದುದರಿಂದ ಇವರಿಗೆ ಕಷ್ಟವುಂಟಾದದ್ದೇನೂ ಆಶ್ಚರ್ಯವಲ್ಲ. ಸ್ವಲ್ಪಹೊತ್ತು ಮಂದಮಾರುತದಿಂದ ಕೂಡಿದ ಮೈದಾನದಲ್ಲಿ ಕುಳಿತು ಶ್ರಮಪರಿಹಾರ ಮಾಡಿಕೊಂಡು ತಮ್ಮ ಸ್ಥಿತಿಯನ್ನು ಕುರಿತು ಯೋಚಿಸಲಾರಂಭಿಸಿದರು. ತಮ್ಮ ಸೈನ್ಯವಿರುವ ಕಡೆಯನ್ನು ಹುಡುಕಿ ನೋಡೋಣವೆಂದರೆ ಕಾಲುಗಳು ಹೆಜ್ಜೆಯಿಡುವುದಕ್ಕಾಗದಷ್ಟು ನೋಯುತ್ತಿದ್ದವು. "ಸಾವಕಾಶ ಮಾಡಿದರೆ ಸುಖಲತೆಯ ಗತಿಯೇನಾಗುವುದೋ? 'ತಂದೆ ಬಂದರು' ಎಂದು ಪದ್ಮಲತೆಯು ಹೇಳಿದಾಗಲೇ ಭಯವಾಗಿದ್ದಿತು. ಇದೆಂತಹ ವಿಪರೀತಕಾಲವು. ನಾನವಳನ್ನು ನೋಡದೆಯೇ ಇರಬಾರದಾಗಿತ್ತೇ? ಅಯ್ಯೋ! ಮೃದುಮಧುರ ಸುಂದರಿಯಾದ ಅವಳಿಗೆ ಭಗವಂತನು ಯಾವ ಕಷ್ಟವನ್ನೂ ಕೊಡದಿರಬೇಕು" ಎಂದು ಸರ್ದಾರ್‌ಸಿಂಹನು ಚಿಂತಿಸಿದ್ದನ್ನು ಕಂಡ ಪ್ರತಾಪಸಿಂಹನು— 'ಮಹಾರಾಜ, ಭಗವಂತನು ಎಂದೂ ಸದ್ಗುಣನಿಧಿಯಾದ ರಾಜಕುಮಾರಿಗೆ ಕಷ್ಟವನ್ನುಂಟುಮಾಡನು. ದಯಮಾಡಿಸಿ; ನಿಧಾನವಾಗಿ ನಡೆದುಕೊಂಡು ಹೋಗಿ ನಮ್ಮ ಸೈನ್ಯದೊಡನೆ ಸೇರಿ ಕೋಟೆಯನ್ನು ಮುತ್ತಿ ಅಂಗನಾಮಣಿಯನ್ನು ಸ್ವಾಧೀನ ಮಾಡಿಕೊಳ್ಳೋಣ" ಎಂದದ್ದನ್ನು ಕೇಳಿದ ರಾಜಕುಮಾರನು –"ಮಂತ್ರೀ, ಅವಳು ಬೇರೆ ಜೀವಿಸಿರಲಾರಳು. ಪಾತಕಿಯಾದ ಅಮರಸಿಂಹನು ಕಿರಿಯ ಪತ್ನಿಯಾದ ಮಂಜುಳೆಯ ಮಾತನ್ನು ಕೇಳಿ ಅವಳನ್ನು ಹೇಗೂ ಸಂಹರಿಸಿರಬಹುದೆಂದು ನನಗೆ ತೋರುವುದು. 'ಪರಗೃಹವಾಸವೇ ಪ್ರಾಣಸಂಕಟ' ಎನ್ನುವುದು ನಮ್ಮ ವಿಷಯದಲ್ಲಿ ನಿಶ್ಚಯವಾಯಿತು. ಮಿತ್ರಾ, ಏಳು; ಹೋಗಿ ನೋಡೋಣ. ಸರ್ವರ ಕ್ಷೇಮ ಚಿಂತನೆಯ ಭಾರವನ್ನು ಭಗವಂತನು ವಹಿಸಿರುವಲ್ಲಿ ನಾವೇಕೆ ಚಿಂತಿಸಬೇಕು? ಭಗವಂತನ

ದಯವು ಹೇಗಿದೆಯೋ' ಎಂದು ಹೇಳಿ ಎದ್ದು, ಮಿತ್ರರಿಬ್ಬರೂ ಕಷ್ಟದಿಂದ ನಡೆಯ ಲಾರಂಭಿಸಿದರು. ಸೈನಿಕರು ಅಲ್ಲಿಂದಿಲ್ಲಿಗೆ ಓಡುತ್ತಿರುವ ಶಬ್ದವನ್ನು ಕೇಳಿ ಜಾಗ್ರತೆ ಹೋಗಿ ಎದುರಿನಲ್ಲಿ ಐದಾರುಜನ ಕುದುರೆ ವೀರರು ಬರುವುದನ್ನು ಕಂಡು ನಿಲ್ಲಲು, ಬಂದ ಸೈನಿಕರು ಸರ್ದಾರ್‌ಸಿಂಹನನ್ನು ಕಂಡ ಕೂಡಲೇ 'ಮಹಾರಾಜನಿಗೆ ಜಯ ವಾಗಲಿ' ಎಂದು ಕರಘೋಷಮಾಡಿ 'ಮಹಾರಾಜ, ತಮ್ಮನ್ನೇ ಹುಡುಕುತ್ತಿದ್ದೆವು. ಜೀವ ಸಹಿತ ಬಂದಿರಲ್ಲಾ' ಎಂದು ಹೇಳಿ ಕುದುರೆಯಿಂದಿಳಿದು ವಂದಿಸಿದರು. ಅರಸನೂ ಮಂತ್ರಿಯೂ ಸೈನಿಕರ ಕುದುರೆಯನ್ನು ಹತ್ತಿ ವೇಗವಾಗಿ ಕೋಟೆಯನ್ನು ಕುರಿತು ಹೊರಟರು. ಕೋಟೆಯ ಸಮೀಪದಲ್ಲಿ ಶತ್ರು ಸೈನ್ಯವಿರಲಿಲ್ಲ. ಅಲ್ಲಿದ್ದ ತಮ್ಮ ಸೈನ್ಯವನ್ನು ಕೇಳಲು ಅಮರಸಿಂಹನ ಸೈನ್ಯವು ಸೋತು ಹಿಮ್ಮೆಟ್ಟಿದ್ದಾಗಿ ತಿಳಿದು ಬಂದಿತು. 'ಸರಸ್ವತೀಸದನವನ್ನು ಪ್ರವೇಶಿಸಿದ ರಾಜಸಿಂಹನು ಹೊರಗೆ ಬಂದನೇ' ಎಂದು ಕೇಳಲು ಇಲ್ಲವೆಂಬ ಉತ್ತರ ಬಂದಿತು. 'ಪ್ರತಾಪಾ, ಸೈನ್ಯವನ್ನು ಸಜ್ಜುಗೊಳಿಸಲು ಕಾರ್ಯವಿನ್ನೂ ಮಿಂಚಲಿಲ್ಲ. ಅಮರಸಿಂಹನೊಬ್ಬನು ಮಾತ್ರ ದುರ್ಗ ದಲ್ಲಿರುವುದಾಗಿ ತೋರುತ್ತದೆ. ನಾನು ದುರ್ಗದ್ವಾರದಲ್ಲಿ ನಿಂತು ಆತನು ಬರುವು ದನ್ನು ನಿರೀಕ್ಷಿಸುತ್ತಿರುತ್ತೇನೆ. ಜಗಳವು ಹೆಚ್ಚಾದರೆ ನೀನು ಸೈನ್ಯವನ್ನು ತೆಗೆದು ಕೊಂಡು ಯುದ್ಧಕ್ಕೆ ಬರಬಹುದು' ಎಂದು ಹೇಳಿ ದೇವಾಲಯದ ಸಮೀಪದಲ್ಲಿದ್ದ ಬಾಗಿಲಿನ ಸಮೀಪಕ್ಕೆ ಸರ್ದಾರ್‌ಸಿಂಹನು ಹೋದನು.

ಅಮರಸಿಂಹನು ಬರುವನೆಂದು ಕಾದಿದ್ದುದು ನಿಷ್ಪ್ರಯೋಜನವಾಯಿತು. ಬಹಳ ಹೊತ್ತು ಕಾದಿದ್ದರೂ ಒಳಗಿದ್ದವರೊಬ್ಬರೂ ಹೊರಗೆ ಬರಲೇ ಇಲ್ಲ. ಸರ್ದಾರ್ ಸಿಂಹನೂ ಪ್ರತಾಪಸಿಂಹನೂ ಯೋಚಿಸತೊಡಗಿದರು. ಸುಖಲತೆಯೊಡನೆ ರಾಜಾ ಅಮರಸಿಂಹನು ಬರಬೇಕಾಗಿದ್ದರೆ ಸರ್ದಾರ್‌ಸಿಂಹನು ನಿಂತಿದ್ದ ಮಾರ್ಗವಾಗಿಯೇ ಬರಬೇಕಲ್ಲದೆ ಮತ್ತಾವ ದಾರಿಯೂ ಇಲ್ಲ. ಹಾಗೂ ತಪ್ಪಿಸಿಕೊಂಡು ಹೋಗಬೇ ಕಾಗಿದ್ದರೆ ಸುರಂಗದಿಂದ ಹೋಗಬೇಕಾಗಿದ್ದುದರಿಂದ ಒಂದೊಂದು ಕಡೆ ಒಬ್ಬೊಬ್ಬ ರಿರುವುದು ಉತ್ತಮವೆಂದು ತೀರ್ಮಾನಿಸಿ ಪ್ರತಾಪನು ದೇವಾಲಯದ ಬಾಗಿಲನ್ನು ಕಾಯುತ್ತ ನಿಂತನು. ವೇಗವಾಗಿ ಹೋಗತಕ್ಕ ಕುದುರೆಯೊಂದನ್ನು ಹತ್ತಿ ಸರ್ದಾರ್ ಸಿಂಹನು ಸುರಂಗ ಮಾರ್ಗವನ್ನು ಮೊದಲೇ ಅರಿತವನಾದುದರಿಂದ ಸದ್ದಿಲ್ಲದೆ ಕುದುರೆ ಯನ್ನೊಂದು ಮರಕ್ಕೆ ಕಟ್ಟಿ ತನ್ನ ಉಡುಪುಗಳನ್ನು ತೆಗೆದಿಟ್ಟು ಒಬ್ಬ ಕೃಷಿಕನ ವೇಷ ವನ್ನು ಧರಿಸಿ ಎದುರಿಗಿದ್ದುದೊಂದು ಗುಡ್ಡದ ಮೇಲೆ ಕುಳಿತು ಮುಂದೆ ನಡೆಯುವು ದನ್ನು ನಿರೀಕ್ಷಿಸುತ್ತಿದ್ದನು. ಬಹಳ ಹೊತ್ತು ಯಾರೂ ಬಾರದಿದ್ದುದನ್ನು ಕಂಡು

ಈ ಕೆಳಗೆ ಕಂಡುಬರುವಂತೆ ತನ್ನಲ್ಲಿ ತಾನೇ ಚಿಂತಿಸಲಾರಂಭಿಸಿದನು—“ಆಹಾ ಎಂತಹ ಮಾಯಾ ಪ್ರಪಂಚವಿದು? ಹಾ! ಪ್ರಪಂಚವೇ, ಒಂದೇ ದಿನದಲ್ಲಿ ಸುಖವನ್ನೂ ದುಃಖವನ್ನೂ, ಬಿಸಿಲನ್ನೂ ನೆರಳನ್ನೂ, ಐಶ್ವರ್ಯವನ್ನೂ ದಾರಿದ್ರ್ಯವನ್ನೂ ಕೊಡತಕ್ಕ ಶಕ್ತಿಯು ನಿನ್ನಲ್ಲಿರುವುದು! ಸಂಗೀತದಲ್ಲಿ ಬಯಸಿದ ನನ್ನ ಮನಸ್ಸನ್ನು ಅತಿಶಯರೂಪದಿಂದ ಪರವಶಗೊಳಿಸಿ ರಮಣಿಯು ಕಡೆಗಣ್ಣೋಟ, ಪ್ರೇಮ ಸಂಭಾಷಣೆ, ಅಂಗಸ್ಪರ್ಶ ಇತ್ಯಾದಿ ಸುಖಗಳು ಲಭಿಸುವ ಮೊದಲೇ ದುಃಖವಾರಿಧಿಯಲ್ಲಿ ನೂಕಿದೆಯಲ್ಲವೇ? ನನ್ನ ಮನವಾದರೋ ಆ ರಮಣಿಯ ಕಡೆಗೇ ಎಳೆಯುತ್ತಿರುವುದು. ನನ್ನರಾಜ್ಯ, ಭೋಗ ಸುಖಗಳೆಲ್ಲವೂ ನನಗೆ ತೃಣಸಮಾನವಾದುವು. ಸುಖಲತೆಯ ನಾಮವೇ ನನ್ನ ಮನೋರಾಜ್ಯದಲ್ಲಧಿಕಾರ ಮಾಡತೊಡಗಿದೆ. ಅವಳ ಕಷ್ಟದಿಂದವಳನ್ನು ಬಿಡಿಸಿ ಸುಖದಿಂದಿರಿಸಲಾರದ ಅರಸುತನವು ನನಗೇಕೆ, ರಾಜ್ಯಾಧಿಕಾರವು ನನಗೇಕೆ? ರಾಜ್ಯವನ್ನು ನ್ಯಾಯದಿಂದಾಳುವುದು ರಾಜಧರ್ಮವು. ಅವರ ವೃತ್ತಾಂತವೆಲ್ಲವನ್ನೂ ಪದ್ಮಲತೆಯ ಮೂಲಕವಾಗರಿತುದು ಮೊದಲು ನನ್ನ ದುಃಖಕ್ಕೆ ಎಲ್ಲೆಯಿಲ್ಲ. ಅಷ್ಟಿದ್ದರೂ ಸುಖಲತೆಯ ಮುಖದರ್ಶನದಿಂದೆಲ್ಲವನ್ನೂ ಮರೆತಿದ್ದೆನು. ನನ್ನ ಪ್ರೇಯಸಿಯನ್ನು ನಾನು ಪುನಃ ಕಾಣುವೆನೇ? ನನ್ನ ಮನವನ್ನಾಕರ್ಷಿಸಿದ ದೇವಸುಂದರಿಯ ದರ್ಶನ ಲಾಭವು ಪುನಃ ನನಗೆದೊರೆಯುವುದೇ? ಕಷ್ಟ.” ಎಂದು ವ್ಯಸನಪಡುತ್ತಿರುವಷ್ಟರಲ್ಲಿ ಸುರಂಗ ಮಾರ್ಗದಲ್ಲೇನೋ ಶಬ್ದವಾದಂತಾಗಲು, ಆ ಕಡೆ ತಿರುಗಿ ನೋಡಲು, ರಾಜಾ ಅಮರಸಿಂಹನು ಸದ್ದಿಲ್ಲದೆ ಹೊರಗೆ ಬಂದು ಅಲ್ಲಿ ಯಾರೂ ಇಲ್ಲದ್ದನ್ನು ಕಂಡು—‘ಬನ್ನಿ, ಯಾರಾದರೂ ಬಾಯಿಬಿಟ್ಟರೆ ಅವರನ್ನು ಸೀಳುವೆನು. ಶತ್ರುಸೈನ್ಯವು ಬರುವ ಮೊದಲು ನಮ್ಮ ರಾಜ್ಯವನ್ನು ಸೇರಬೇಕು’ ಎಂದನು. ಸರ್ದಾರ್‌ಸಿಂಹನು ಮರೆಯಲ್ಲಿ ನಿಂತು ನಡೆಯುವುದೇನೆಂದು ಎವೆಯಿಕ್ಕದೆ ನೋಡುತ್ತಿದ್ದನು.

ಅಮರಸಿಂಹ, ಸುಖಲತೆ, ಪದ್ಮಲತೆ ಮಾನಸಿಂಹ ಈ ನಾಲ್ಕು ಜನರೂ ಒಬ್ಬರ ಹಿಂದೊಬ್ಬರಾಗಿ ಸುರಂಗದಿಂದೀಚೆಗೆ ಬಂದರು. ಅಮರಸಿಂಹನು ಸುರಂಗಮಾರ್ಗವನ್ನು ಮುಚ್ಚಿ ಬೇರೆ ಬೀಗವನ್ನು ಹಾಕಿ ಮಗಳನ್ನು ನೋಡಿ—‘ಪಾತಕೀ, ಇನ್ನು ನಿನ್ನನ್ನು ನನ್ನ ರಾಜ್ಯದಲ್ಲಿಡಲಾರೆನು. ಸುಖಭೋಗಾದಿಗಳ ಆಸೆಯು ಇಂದಿಗೇ ಪರಿಸಮಾಪ್ತಿಯಾಯಿತೆಂದು ತಿಳಿ. ರಾಜಪುತ್ರಿಯಾದುದರಿಂದ ನಿನ್ನನ್ನು ಸಾಧಾರಣ ಮನುಷ್ಯನಿಗೆ ವಿವಾಹ ಮಾಡಿಕೊಡಲು ನನ್ನ ಮನವೊಪ್ಪಲಿಲ್ಲ. ಇನ್ನು ನಿನ್ನ ವಿವಾಹಕ್ಕೆಂದು ನಾನು ಯಾವ ರಾಜಪುತ್ರನನ್ನೂ ಹುಡುಕುವನಲ್ಲ. ಸುಖಸಂತೋಷಗಳಾ

ಸೆಯನ್ನು ತ್ಯಜಿಸು. ಆದರೆ ನಿನ್ನ ವಿಷಯದಲ್ಲಿ ಪಶ್ಚಾತ್ತಾಪದಿಂದ ನಾನು ಮಾಡ ತಕ್ಕ ಕಾರ್ಯವೊಂದುಂಟು. ನನ್ನ ಸಹೋದರನೊಬ್ಬನು ಪೂರ್ವ ಸಮುದ್ರತೀರದ ಲ್ಲೊಂದು ಪರ್ವತದಲ್ಲಿ ವಾಸಮಾಡುತ್ತಿರುವನು. ಅವನು ಮಹಾ ಉತ್ತಮನು. ನಿನ್ನನ್ನವನಬಳಿ ಕಳುಹಿಸುವೆನು. ಅವನಿಗೆ ಸೇವೆಮಾಡಿಕೊಂಡು ನಿನ್ನೀ ಜನ್ಮವನ್ನು ಸನ್ಯಾಸಿನಿಯಂತೆ ಕಳೆಯಬೇಕು. ನನ್ನಬಳಿ ಇಟ್ಟುಕೊಂಡರ ನಿನ್ನ ಚಿಕ್ಕಮ್ಮನು ಒಂದೇ ದಿನದಲ್ಲಿ ನಿನ್ನ ನಾಶವನ್ನು ಮಾಡುವಳು. ಅಂತಹ ಕಷ್ಟವನ್ನು ನಿನಗುಂಟು ಮಾಡುವ ಪಾಪಿಯು ನಾನಲ್ಲ. ತಿಳಿಯಿತೇ? ಪ್ರಪಂಚ ಸುಖಕ್ಕೂ ನಿನಗೂ ಸಂಬಂಧ ವಿಲ್ಲದ ಸನ್ಯಾಸಿನಿಯೆಂದು ತಿಳಿದುಕೋ' ಎಂದು ಕೋಪದಿಂದ ಹೇಳಿದ ಮಾತುಗಳು ಸರ್ದಾರ್‌ಸಿಂಹನ ಕಿವಿಗೂ ಬಿತ್ತು. ಇನ್ನು ತಾನು ಸುಮ್ಮನಿರುವುದು ಸರಿಯಲ್ಲ ವೆಂದು ತಿಳಿದು—'ಇನ್ನು ಕಾಲವಿಳಂಬ ಮಾಡಿದಲ್ಲಿ ಹಾನಿಯುಂಟಾಗುವುದು. ಈ ಮುದುಕನು ನನ್ನನ್ನು ಹಿಡಿಯಲಾರನು' ಎಂದು ಯೋಚಿಸಿ, ಸುಖಲತೆಯಿರುವ ಸ್ಥಳಕ್ಕೆ ಒಂದೇ ಹಾರಿಗೆ ಹಾರಿ ಅವಳನ್ನೆತ್ತಿಕೊಂಡು ಪದ್ಮಲತೆಯ ಕಿವಿಯಲ್ಲಿ 'ಪದ್ಮಾ, ಹೆದರಬೇಡ' ಎಂದು ಹೇಳಿ ಓಡಿಹೋದನು.

## ೯ನೆಯ ಅಧ್ಯಾಯ

### ಅಮರಸಿಂಹನ ಕೋಪವು



ಕಣ್ಮುಚ್ಚಿ ತೆರೆಯುವಷ್ಟರಲ್ಲಾದ ಈ ಸಂಭವವನ್ನು ಕಂಡ ರಾಜಾ ಅಮರಸಿಂಹನು ವಿಸ್ಮಿತನಾದನು. 'ಇಲ್ಲಿ ಬಂದವನಾರು' ಎಂದು ಘರ್ಜಿಸಿದನು. 'ಪದ್ಮಲತಾ, ನೀನವನನ್ನು ಬಲ್ಲೆಯಾ? ಅವನು ಕಳ್ಳನೇನು? ಎಷ್ಟುಧೈರ್ಯ! ಇಷ್ಟು ದೊಡ್ಡ ಕನ್ಯೆಯನ್ನು ಎತ್ತಿ ಕೊಂಡೋಡುವುದು ಮನುಷ್ಯನಿಗೆ ಸಾಧ್ಯವೇ! ಸುಖಲತಾ, ನಿನ್ನ ಗತಿಯೀರೀತಿ ಯಾಗಬೇಕೇ? ಪುರಜನರು ನನ್ನನ್ನೇನೆಂದಾರು? ಅರಸನು ಕೈಲಾಗದೆ ತನ್ನ ಮಗ ಳನ್ನು ಕಳ್ಳನವಶಕ್ಕೆ ಒಪ್ಪಿಸಿದನೆಂದು ಅಲ್ಲಗಳೆಯಲಾರರೇ? ಏನುಮಾಡಲಿ? ಒಂದು ವೇಳೆ ಪದ್ಮಾ, ಇದೆಲ್ಲಾ ನಿನ್ನ ವಂಚನೆಯಾಗಿರಬಹುದೇ?' ಎಂದು ಒಂದಕ್ಕೊಂದು ಸಂಬಂಧವಿಲ್ಲದ ಮಾತುಗಳನ್ನಾಡುತಿದ್ದನು.

ಇದಕ್ಕೆ ಪದ್ಮಲತೆಯು—'ಮಹಾರಾಜ, ಅಲ್ಪಮತಿಯಾದ ನನ್ನನ್ನು ತಾವೇನು ದೂಷಿಸಿದರೂ ಚಿಂತೆಯಿಲ್ಲ. ನನ್ನ ಜೀವಗೆಳತಿಯಾದ ರಾಜಕುಮಾರಿಯನ್ನಾರೋ ಕಳ್ಳನು ಅಪಹರಿಸಿಕೊಂಡೋಡುತ್ತಿರುವನಲ್ಲಾ, ಅವಳನ್ನು ರಕ್ಷಿಸುವುದಲ್ಲವೇ ಮೊದಲ ಕೆಲಸ. ತಾವು ಒಂಟಿಯಾಗಿರುವಿರಿ, ನಾನೋ ಸ್ತ್ರೀಯಳು. ಮಾನಸಿಂಹನೋ ಕೈಲಾಗದ ಹೇಡಿ' ಎಂದಳು. ರಾಜಾ ಅಮರಸಿಂಹನೇನು ಮಾಡಿಯಾನು? 'ಪದ್ಮಾ, ಬರುವ ವಿಪತ್ತು ಬಂದೇ ತೀರುವುದಲ್ಲದೆ ದಾರಿಯಲ್ಲಿ ನಿಲ್ಲುವುದೇ? ಇಂತಹ ವಿಪತ್ಸಮಯದಲ್ಲಿ ನಮಗೆ ಸಹಾಯವಾಗುವರಾರು? ಬಾ, ಕಳ್ಳನು ಹೋದ ಮಾರ್ಗವನ್ನನುಸರಿಸಿ ನಾವೂ ಹೋಗೋಣ' ಎಂದನು.

'ಪದ್ಮಲತಾ, ಹೆದರಬೇಡ ' ಎಂದು ಹೇಳಿದ ಧ್ವನಿಯು ಯಾರೋ ಪರಿಚಯವುಳ್ಳವರಂತೆ ತೋರುವುದು. ಒಂದುವೇಳೆ ಸರ್ದಾರ್‌ಸಿಂಹನಾಗಿರಬಹುದೇ? ಹಾಗಿದ್ದಲ್ಲಿ ನನ್ನ ಮಿತ್ರಳು ಅದೃಷ್ಟವಂತಳೇ ಸರಿ ಹಾಗಲ್ಲದೆ ಕಳ್ಳನಾಗಿದ್ದಲ್ಲಿ ನನ್ನ ಮಿತ್ರಳ ಗತಿಯೇನು? ಮಹಾರಾಜನನ್ನು ಇಲ್ಲಿಯೇ ಇರುವಂತೆ ಹೇಳಿ, ಮಂದಮತಿಯಾದ ಮಾನಸಿಂಹನನ್ನು ಕೂಡ ಕರದುಕೊಂಡು ನಾನೂ ಓಡಲೇ?' ಎಂದು ಪದ್ಮಲತೆಯು ಯೋಚಿಸಿ, ಕೊನೆಗೆ ಹಾಗೆಯೇ ಮಾಡುವುದಾಗಿ ತಿರ್ಮಾನಿಸಿ—'ಮಹಾರಾಜ, ತಾವು ಸ್ವಲ್ಪ ವಿಶ್ರಮಿಸಿಕೊಳ್ಳಿ, ಮಾನಸಿಂಹನನ್ನು ಸಂಗಡ ಕರೆದುಕೊಂಡು ನಾನು ಹುಡುಕುತ್ತೇನೆ' ಎಂದು ಉತ್ತರ ನಿರೀಕ್ಷಣೆ ಮಾಡದೆ ಹೊರಟುಹೋದಳು ವೃದ್ಧನಾದ ಅಮರಸಿಂಹನು ಮೌನವಾಗಿ ಒಂದು ಕಡೆ ಯೋಚಿಸುತ್ತ ಕುಳಿತಿದ್ದನು.

'ಪದ್ಮಾ, ಏನೇ? ಸುಖಲತೆಯನ್ನು ನನಗೆ ಮದುವೆ ಮಾಡಿಸುತ್ತೇನೆಂದು ಹೇಳಿದೆಯಲ್ಲಾ, ಅವಳನ್ನಿಷ್ಟಾಟವಾಡಿಸುವಳೂ ನೀನೇ? ಈಗಲಾದರೂ ಅವಳು ಸಿಕ್ಕಿದಕೂಡಲೇ ನನಗೆ ವಿವಾಹ ಮಾಡಿನಬೇಕು. ತಿಳಿಯಿತೇ?' ಎಂದು ಮಾನಸಿಂಹನು ಕೇಳಿದನು.

ಅದಕ್ಕೆ ಪದ್ಮಲತೆಯು—''ಛೀ! ಮರ್ಕಟನೇ. ನೀನು ಕೆಟ್ಟಕೇಡಿಗೆ ಮದುವೆ ಬೇರೇ ಬೇಕೇ? ಇನ್ನಾ ಮಾತು ಹೇಳಿದರೆ ಕಪಾಳಸೇವೆಯಾಗುವುದು, ಬಲ್ಲೆಯಾ? ಮುಚ್ಚು ಬಾಯಿ. ನನ್ನರಸಿ ಜೀವಿಸಿರುವಳೋ, ಇಲ್ಲವೋ? ಯೋಚನೆಯಿಲ್ಲದೆ ಮಾತನಾಡುವೆ. ವಿವೇಕರಹಿತನಾದ ನರನೇ, ಬಾಯಿಮುಚ್ಚಿಕೊಂಡು ನಡೆ ನನ್ನ ಜೊತೆಯಲ್ಲಿ'' ಎಂದಳು.

ಪುನಃ ಮಾನಸಿಂಹನು—"ಏನೇ, ಬಾಯಿಗೆ ಬಂದಹಾಗೆಲ್ಲಾ ಬಯ್ಯುತ್ತೀಯೇ? ಇದು—ಇದು ಅಕ್ಕನಿಗೆ ಹೇಳಿ ನಿನ್ನ ಕೊಬ್ಬು ಕಡಮೆಯಾಗುವಂತೆ ಮಾಡುತ್ತೇನೆ. ನೀವಿಬ್ಬರೂ ಅರಮನೆಯಲ್ಲಿ ಆ ಇಬ್ಬರು ರಾಜಕುಮಾರರೊಡನೆ ಆಡಿದ ಆಟವನ್ನೆಲ್ಲಾ ಹೇಳುತ್ತೇನೆ. ಭಾವ ಕೊಟ್ಟ ಏಟು ನಿನಗೆ ಸಾಲದು? ನನ್ನನ್ನು ಕಂಡರೆ ನಿನಗೇಕಿಷ್ಟು ಸಿಟ್ಟು?" ಎಂದು ಕೇಳಲು, ಪದ್ಮಲತೆಯು ಕೋಪಗೊಂಡು-'ಅಲ್ಪವೇ, ಓಡು; ಹೇಳು ಹೋಗು. ನಿಮ್ಮಕ್ಕನೂ ಭಾವನೂ ನಿನ್ನನ್ನು ಸಂತೈಸುವರು; ಛೀ! ನನ್ನೊಡನೆ ಮಾತನಾಡಬೇಡ' ಎಂದಳು.

ಪ್ರತಾಪಸಿಂಹನು ಕುದುರೆ ಸವಾರರಿಬ್ಬರೊಡನೆ ಬರುತ್ತಿರುವುದನ್ನು ಕಂಡ ಪದ್ಮಲತೆಯು ಧೈರ್ಯದಿಂದ ನಿಂತಳು. ಪ್ರತಾಪಸಿಂಹನು ಕೆಳಗಿಳಿದು- "ಪದ್ಮಾ, ಈ ಅಶ್ವವನ್ನೇರು. ಮಾರ್ಗದಲ್ಲಿ ಎಲ್ಲ ವಿಷಯವನ್ನೂ ಸವಿಸ್ತಾರವಾಗಿ ಹೇಳುವೆನು" ಎಂದು ಹೇಳಿ ಮಾನಸಿಂಹನನ್ನು ನೋಡಿ 'ಈ ಮೃತ್ಯುದೇವತೆಯೆಲ್ಲಿಂದ ಬಂತು?' ಎಂದು ಕೇಳಲು ಪದ್ಮಲತೆಯು 'ಅವನನ್ನು ಬಿಟ್ಟುಬಿಡಬೇಡಿ, ಬಿಟ್ಟರೆ ಕಾರ್ಯಕೆಡು ವುದು. ರಾಜಾ ಅಮರಸಿಂಹನ ಬಳಿಗೆ ಹೋಗಿ ಒಂದಕ್ಕೆ ಹತ್ತಾಗಿ ಹೇಳುವನು. ಅವನನ್ನು ಜೋಪಾನವಾಗಿ ಜತೆಯಲ್ಲಿ ಕರೆದುಕೊಂಡು ಹೋಗುವುದು ಮೇಲು' ಎಂದು ಹೇಳಲು ಪ್ರತಾಪಸಿಂಹನ ಅಪ್ಪಣೆಯಂತೆ ಸೈನಿಕನೊಬ್ಬನು ಕುದುರೆಯ ಮೇಲೆ ಹತ್ತಿಸಲು 'ನಾನೊಲ್ಲೆ. ಕುದುರೆಯು ನನ್ನನ್ನು ಕಚ್ಚುವುದು' ಎಂದು ಮಾನ ಸಿಂಹನು ಮೊರೆಯಿಡುತ್ತಿದ್ದನು. ಇವನ ಮೊರೆಯನ್ನು ಕೇಳುವರಾರು? ಕುದುರೆ ಗಳು ವಾಯುಗತಿಯನ್ನು ಮೀರಿಸಿದ್ದವು. ಪದ್ಮಲತೆಯು ಅತಿಚಾತುರ್ಯದಿಂದ ತನ್ನ ಕುದುರೆಯನ್ನು ನಡೆಸಿದಳು.

ರಾಜಾ ಅಮರಸಿಂಹನು ಬಹಳ ಹೊತ್ತಿನವರೆಗೂ ಪದ್ಮಲತೆಯು ಬರುವ ಮಾರ್ಗ ವನ್ನೇ ನಿರೀಕ್ಷಿಸುತಿದ್ದನು. ಮರೆಯಾದವರನ್ನು ಕಾಣುವುದು ಹೇಗೆ? ಕಾದು ಕಾದು ಬೇಸರವಾಗಲು ಕುಳಿತಿದ್ದ ಸ್ಥಳದಿಂದ ಎದ್ದು ತಿರುಗಾಡುತ್ತ 'ಆಹಾ! ನಾನು ಅರಸ ನಾಗಲಿ ಭಿಕ್ಷುಕನಾಗಲಿ ದುಃಖವು ಯಾರನ್ನೂ ಬಿಡದು' ಎಂದು ಅವನ ಮನಸ್ಸಿಗೆ ತೋರಲು, ಮುಂದೇನು ಮಾಡಬೇಕೆಂದು ಚಿಂತಿಸಲಾರಂಭಿಸಿದನು.

ಮಹಾರಾಜನು ಈ ರೀತಿ ಚಿಂತಿಸುವುದನ್ನು ಸ್ವಲ್ಪವೂ ಲಕ್ಷ್ಯಮಾಡದೆ ಅಂಧ ಕಾರವು ಎಲ್ಲೆಲ್ಲಿಯೂ ತನ್ನಧಿಕಾರವನ್ನು ನಡೆಸಲಾರಂಭಿಸಿತು. ಸುಂದರವಾಗಿದ್ದ ವಸ್ತುಗಳೆಲ್ಲವೂ ಕಾಂತಿಹೀನವಾದವು. ಸೂರ್ಯನು ಇನ್ನು ತನ್ನಾಟವು ನಡೆಯದೆಂದು

ದುಃಖಿತನಾಗಿ ಪಶ್ಚಿಮಸಮುದ್ರದಲ್ಲಿ ಧುಮುಕಿದನು. ವೃದ್ಧನಾದ ರಾಜಾ ಅಮರಸಿಂಹನು ಭಗವಂತನಿಗೆ ಮೊರೆಯಿಡಲಾರಂಭಿಸಿದನು. ಆತನ ದುಃಖವನ್ನು ಸರ್ವದಯಾಪರನಾದ ಭಗವಂತನು ಕಂಡು ಮನಕರಗಿದನೋ ಏನೋ ಎಂಬಂತೆ ನಾಲ್ಕಾರು ಜನ ವೀರರು ತಮ್ಮರಸನನ್ನು ಹುಡುಕಿಕೊಂಡು ಆ ಮಾರ್ಗವಾಗಿ ಬಂದರು. ಅಮರಸಿಂಹನು ಶತ್ರುಸೈನ್ಯವೆಂದು ಹೆದರಿ ಬಹಳಹೊತ್ತಿನವರೆಗೂ ಮಾತನಾಡದೆ ನೋಡುತಿದ್ದವನು, ಅವರು ಸಮೀಪಕ್ಕೆ ಬಂದಕೂಡಲೇ ತನ್ನಕಡೆಯ ವೀರರೆಂದು ತಿಳಿದು, ಅವರನ್ನು ಕುರಿತು "ವೀರರೇ, ವೃದ್ಧನಾದ ನಿಮ್ಮರಸನನ್ನು ಒಂಟಿಯಾಗಿ ಬಿಟ್ಟುಹೋಗಬೇಡಿ" ಎಂದು ಕೂಗಿದನು. ಆ ವೀರರು ತಮ್ಮರಸನಿಗೆ ವಂದಿಸಿ, "ಮಹಾರಾಜಾ ಕ್ಷಮಿಸಬೇಕು. ತಮ್ಮನ್ನೆ ಹುಡುಕಿಕೊಂಡು ಅಲೆಯುತಿದ್ದೆವು. ದೈವಕೃಪೆಯಿಂದ ತಮ್ಮನ್ನು ಕಂಡೆವು. ದಯವಿಟ್ಟು ಈ ಕುದುರೆಯನ್ನೇರಬೇಕು. ತಮ್ಮ ಅಶ್ವವು ಸಿದ್ಧವಾಗಿರುವದು" ಎಂದು ಹೇಳಿ ಅರಸನನ್ನು ಉಪಚರಿಸಿದರು.

ರಾಜಾ ಅಮರಸಿಂಹನು ತನ್ನ ಕುದುರೆಯನ್ನೇರಿ ಸುಖಲತೆಯನ್ನು ಕಳ್ಳನು ಹೊತ್ತುಕೊಂಡುಹೋದ ದಿಕ್ಕಿಗೆ ಓಡಿಸಲಾರಂಭಿಸಿದನು. ವೀರರೂ ತಮ್ಮರಸನನ್ನು ಹಿಂಬಾಲಿಸಿದರು. ಮಾರ್ಗದಲ್ಲಿ ಕಳ್ಳನೂ ಇಲ್ಲ, ಧೀರನೂ ಇಲ್ಲ. ಸ್ವಲ್ಪಹೊತ್ತಿಗೆ ಮುಂಚೆ ಅಲ್ಲಿ ಕೂಡಿದ್ದ ಸೈನಿಕರೂ ಕಣ್ಮರೆಯಾಗಿದ್ದರು. "ಅಯ್ಯೋ, ವಿಧಾತಾ! ಮಗಳೊಬ್ಬಳಿದ್ದಳು, ಅವಳೂ ಈ ಮಹೀತಲವನ್ನು ಬಿಟ್ಟು ಮಾಯವಾದಳು. ಸರಸ್ವತೀ! ನೀನೆ ಪುಣ್ಯವಂತಳು. ಅದರಿಂದಲ್ಲವೇ ಈ ಕಷ್ಟಗಳನ್ನು ಕಣ್ಣಿಂದ ಕಾಣದ ಮೊದಲೇ ಇಹಲೋಕವನ್ನು ತ್ಯಜಿಸಿದೆ. ನನ್ನನ್ನೀರೀತಿ ಗೋಳಾಡಿಸುವುದಕ್ಕಲ್ಲವೇ ಮಗಳನ್ನು ಪಡೆದೆ. ಯಾವ ಮುಖದಿಂದ ರಾಜ್ಯಕ್ಕೆ ಹೋಗಿ ಮಂತ್ರಿಪ್ರಧಾನಿಗಳಿಗೆ ಉತ್ತರ ಕೊಡಲಿ?" ಎಂದು ಅಮರಸಿಂಹನು ದುಃಖಿಸಿ ತನ್ನ ಸೈನಿಕರನ್ನು ನೋಡಿ "ಪ್ರಿಯಮಿತ್ರರೇ, ನನ್ನ ಪ್ರಿಯಕುವರಿ ಸುಖಲತೆಯನ್ನು ಕಳ್ಳರ್ಯಾರೋ ಅಪಹರಿಸಿರುವರು. ಅವಳ ಗತಿಯೇನಾಯಿತೋ? ವೀರಾಧಿವೀರರಾದ ನೀವಿದ್ದೂ, ಜನಕನಾದ ನಾನಿದ್ದೂ ಕನ್ಯೆಯೊಬ್ಬಳನ್ನು ರಕ್ಷಿಸಲಸಮರ್ಥರಾದೆವು. ನನ್ನ ಬಲವಿದ್ದು ಸಾರ್ಥಕವೇನು? ವೀರಶೂರತ್ವವಿದ್ದು ಫಲವೇನಾಯಿತು? ವೃದ್ಧನೆನ್ನುವ ಪದಕ್ಕೆ "ವೀರತ್ವವಿಲ್ಲದವನು" ಎಂಬರ್ಥವನ್ನು ಸ್ಥಿರಗೊಳಿಸಿದೆ. ನನ್ನ ಮುದ್ದು ಬಾಲಕಿಯೇನಾದಳೋ! ಸ್ವಲ್ಪಹೊತ್ತಿಗೆ ಮುಂಚೆ ಅವಳಮೇಲೆ ಬಹಳ ಕೋಪಗೊಂಡಿದ್ದೆ. ಅವಳನ್ನು ಕಳ್ಳನ ಪಾಲುಃ ಮಾಡಿ ಈಗ ಗೋಳಾಡುತ್ತಿದೇನೆ. ಈ ಪುತ್ರೀಶೋಕವನ್ನು ಹೇಗೆ ಸಹಿಸಲಿ? ನನ್ನ ಪ್ರಿಯಪುತ್ರಿಯನ್ನು ಅಂದವುಳ್ಳ ವೀರನಾದ ಅರಸನಿಗೆ ಕೊಟ್ಟು ವಿವಾಹಮಾಡಿ

ಅವರ ಸುಖವನ್ನು ಕಣ್ಣಿಂದ ಕಾಣದೆ ಪಾಪಿಯಾದೆನು ಮಂಜುಳೆಯು ವ್ರತವೀಡೇರಿತು. ಅವಳು ಪರಮಾನಂದಭರಿತಳಾಗುವಳು. ಇನ್ನೀ ಪ್ರಪಂಚದಲ್ಲಿದ್ದು ಸಾರ್ಥಕವೇನು? ನನ್ನ ಮುದ್ದುಗುವರಿಯು ಜೀವಿಸಿರುವಳೋ ಇಲ್ಲವೋ ಅದನ್ನು ತಿಳಿಸುವರಾರು? '' ಎಂದು ಬಾಯ್ಬಿಟ್ಟು ರೋಧಿಸಿದನು

ಅರಸನ ಪರಿತಾಪಸ್ಥಿತಿಯನ್ನು ಕಂಡ ವೀರರೂ ದುಃಖಿತರಾದರು. ತಮ್ಮ ದುಃಖವನ್ನು ತೋರ್ಪಡಿಸದೆ ಧೈರ್ಯವುಳ್ಳವರಂತೆ ನಟಿಸುತ್ತಾ ''ಮಹಾರಾಜ ತಾವು ವ್ಯಸನಪಡುವುದು ನ್ಯಾಯವೇ? ತಮ್ಮ ಕುಮಾರಿಯು ಎಲ್ಲಿದ್ದರೂ ಹುಡುಕಿ ತಂದು ತಮ್ಮ ಸನ್ನಿಧಾನಕ್ಕೆ ಸೇರಿಸುವದು ನಮ್ಮನ್ನು ಸೇರಿದುದು. ತಾವು ದುಃಖಿಸುವದನ್ನು ಬಿಟ್ಟು ಧೈರ್ಯವಾಗಿರಿ. ರಾಜಕುಮಾರಿಯು ಸಾಮಾನ್ಯ ಸ್ತ್ರೀಯಲ್ಲ, ಧರ್ಮದೇವತೆಯು. ಅವಳಿಗೆ ಯಾವ ವಿಧದಲ್ಲಿಯೂ ಕೇಡುಂಟಾಗದು '' ಎಂದು ಸಮಾಧಾನ ವಚನಗಳಿಂದ ಸಂತೈಸಿ ಜ್ಯೋತಿಪುರದ ಮಾರ್ಗವಾಗಿ ಅರಸನನ್ನೂ ಕರೆದುಕೊಂಡು ಹೊರಟುಹೋದರು.

## ಹತ್ತನೆಯ ಅಧ್ಯಾಯವು.

### ಮಂಜುಳೆಯ ಮನೋರಾಜ್ಯವು




ಪಿಯು ನಾಶವಾದಳು, ಅವಳ ಅಹಂಕಾರವು ನಾಶವಾಯಿತು ಆ ಯುಕ್ತಿವಂತಳಾದ ಪದ್ಮಲತೆಯೂ ನಾಶವಾದಳೇ? ಇನ್ನು ನಾನು ಬದುಕಿದೆನು. ಮಹಾರಾಣಿ ಪದವಿಯು ಇಂದೇ ದೊರತಂತಾಯಿತು. ಮುದುಕನ ಕೊಬ್ಬು ಇಳಿಯಿತು ಇನ್ನು ವೃದ್ಧನ ವಿಷಯವಾಗಿ ಬಹಳ ಚಿಂತಿಸಬೇಕಾದುದಿಲ್ಲ. ಅವನಿಂದೇನಾಗುವದು! ಪಾಲುದಾರರು, ವಾರಸುದಾರರು ಎನ್ನುವ ತಂಟೆಯೇ ತಪ್ಪಿತಪ್ಪಾ ಸರ್ವಾಧಿಕಾರವೂ ನನಗೆ. ಸರ್ವಸ್ವತಂತ್ರ. (ಸ್ವಲ್ಪ ಹೊತ್ತು ಮೌನವಾಗಿದ್ದು) ಆದರೆ ಜನರಿಗಾದರೂ ಸ್ವಲ್ಪ ಹೆದರಬೇಕಲ್ಲಾ. ಸುಖಲತೆಯು ವಿವೇಕಚೂಡಾಮಣಿಯಾಗಿದ್ದುದರಿಂದ ಈ ನಗರವಾಸಿಗಳು ಅವಳು ಪಟ್ಟಧಾರಿಣಿಯಾಗುವ ಸುದಿನವನ್ನು ಅತ್ಯಾನಂದದಿಂದಿದಿರುನೋಡುತ್ತಿರುವುದರಲ್ಲಿ ಆಶ್ಚರ್ಯವೇನು? ಅವಳು ಈಗ ಮಾಯವಾಗಿರುವದರಿಂದ ಪ್ರಜೆಗಳು ಬಹಳ ದುಃಖಿತರಾಗುವರು. ಈ ಸಮಯದಲ್ಲಿ ನಾನು ಸಂತೋಷದಿಂದಿದ್ದರೆ ಜನರು ಸಂಶಯ

ಗೊಳ್ಳುವರಾದ್ದರಿಂದ ಜನರ ಬಾಯಿಮುಚ್ಚುವುದಕ್ಕಾದರೂ ವೇಷ ಹಾಕಿಯೇ ತೀರ ಬೇಕು ಅದೋ ಮಾನಸಿಂಹನು ಬರುತ್ತಿರುವನು, ಇನ್ನು ಅವನನ್ನು ಗಮನಿಸಬೇಕಾದುದು ಅತ್ಯಾವಶ್ಯಕವು. ಇಲ್ಲದಿದ್ದರ ಅವನು ಪೂರ್ತಿ ಹುಚ್ಚುಹಿಡಿದವನಾಗುವನು ಎಂದು ಮಂಜುಳೆಯು ತನ್ನಂತಃಪುರದಲ್ಲಿ ಕುಳಿತು ಮನೋರಾಜ್ಯಮಾಡುತ್ತಿದ್ದಳು.

ಮಾನಸಿಂಹನೂ ಬಂದನು. "ತಮ್ಮಾ, ಬಂದೆಯಾ, ಇನ್ನಾದರೂ ವಿವೇಕವಂತನಾಗಲಾರೆಯಾ? ಎಂದು ಪರಿತಾಪದಿಂದ ಕೇಳಿದಳು. ಅದಕ್ಕಾ ಮೂಢನು 'ಹುಂ! ಅಕ್ಕಾ, ನೋಡಿದೆಯಾ! ಆಥಾಕಿನಿಯರನ್ನು? ನನ್ನನ್ನು ಮದುವೆ ಮಾಡಿಕೊಳ್ಳದೆಯೇ ಓಡಿಹೋದರು. ಅಕ್ಕಾ ! ಅಕ್ಕಾ!! ನಾನು ಕೋತೀನ ಕೇಳಿದೆ. ಅದು ಕಚ್ಚಿತು, ಆ ಘಾಯ ಕೂಡ ಇನ್ನು ವಾಸಿಯಾಗಿಲ್ಲ" ಎಂದನು.

**ಮಂಜುಳೆ**—ಅಯ್ಯೋ! ಮೂರ್ಖಾ, ಕೋತೀ ಬಳಿ ಯಾರಾದರೂ ಹೋಗುವರೇ? ನಿನಗ್ಯಾಕೋ ಬುದ್ಧಿಯಿಲ್ಲ.

**ಮಾನಸಿಂಹ**—ಹೋಗಕ್ಕಾ, ನಾಯನ್ನುಕೂಡಾ ಕೇಳಿದೆ, ಹಲ್ಲೀನ ಕೇಳಿದೆ, ಎಲ್ಲಾ ನನ್ನನ್ನೇ ಅಟ್ಟಿಸಿಕೊಂಡು ಬಂದವು

**ಮಂಜುಳೆ**—ಛೀ! ಹುಚ್ಚುಹುಚ್ಚಾಗಿ ಹರಟಬೇಡ, ಯಾರಾದರೂ ನೋಡಿದರೆ ನಕ್ಕಾರು ನೀನು ಹೀಗಾಗುವೆಯೆಂದು ಕನಸಿನಲ್ಲಿ ಕೂಡ ನೆನೆಸಲಿಲ್ಲ—ಎಂದು ಕೋಪದಿಂದ ಹೇಳಿದಳು

**ಮಾನಸಿಂಹ**—ಹುಂ! ನನ್ನನ್ನು ಮೋಸಮಾಡಿ ಓಡಿಹೋದವರನ್ನು ಸುಮ್ಮನೆ ಬಿಟ್ಟೇನೇ? ನಾನೂ ಓಡಿಹೋಗಿ ಅವರನ್ನು ಹಿಡಿದುಕೊಂಡು ಬರುತ್ತಿದ್ದೆ. ನಿನ್ನೊಡನೆ ಹೇಳಿದರೆ ಸುಖಲತೆಯನ್ನು ಹುಡುಕಿ ನನಗೆ ಮದುವೆಮಾಡುವೆಯೆಂದು ಯೋಚಿಸಿ ತಪ್ಪಿಸಿಕೊಂಡು ಬಂದೆ. ಅವರು ನನ್ನನ್ನು ಬಿಡಲೇಇಲ್ಲ. ಅಕ್ಕಾ, ಪದ್ಮಲತೆಯು ಬಹಳ ಹೇಳಿದ್ದರಮೇಲೆ ನನ್ನನ್ನೊಬ್ಬನು ಇಲ್ಲಿಗೆ ಕರೆತಂದು ಬಿಟ್ಟುಹೋದ

**ಮಂಜುಳೆ**—(ಆಶ್ಚರ್ಯದಿಂದ) ಮಾನಸಿಂಹ ಪದ್ಮಲತೆಯೆಲ್ಲಿರುವಳು ? ಸುಖಲತೆಯನ್ನು ನೋಡಿದೆಯಾ? ನಿನ್ನನ್ನೂ ಅವರು ಹಿಡಿದುಕೊಂಡುಹೋದರೇ? ಅವರು ಎಂದರೆ ಯಾರು? ಸರಿಯಾಗಿ ಹೇಳು, ನಿನಗೆ ಮದುವೆ ಮಾಡಿಸುತ್ತೇನೆ

**ಮಾನಸಿಂಹ**—ಹೋಗು ಹೋಗು, ಮೊದಲೊಂದುಸಲ ಹೀಗೆಯೇ ಹೇಳಿ ಮೋಸಮಾಡಿದೆ. ಅಲ್ಲಿ ಹೋದರೆ ಅವರೂ ಹಾಗೆಯೇ ಕೇಳುತ್ತಾರೆ, ಇಲ್ಲಿ ಬಂದರೆ ನೀನೂ ಹಾಗೆಯೇ ಕೇಳುತ್ತೀ. ನಾನು ಹೇಳಿದರೆ ನನಗೇನು ಕೊಡುತ್ತೀರಿ,

ಎಂದರೆ ಮದುವೆಮಾಡಿಸುತ್ತೇನೆ ಎನ್ನುತ್ತೀರಿ. ಒಂದು ದಿನ ಕೂಡ ಮದುವೆಮಾಡಿಸಲಿಲ್ಲ. ಈಗಲಾದರೂ ಮದುವೆ ಮಾಡಿಸುವದು ನಿಶ್ಚಯವಾದರೆ-ಹೋಗಲಿ, ನಿಜವಾದ ವಿಷಯವನ್ನು ಹೇಳುತ್ತೇನೆ.

**ಮಂಜುಳೆ**—ಇದೇನು ಶನಿಕಾಟ! ಮಾನಸಿಂಹ, ಒಳ್ಳೆಯ ಹುಡುಗಿಯನ್ನು ನೋಡಿ ನಿನಗೆ ಮದುವೆ ಮಾಡಿಸುತ್ತೇನೆ. ನಿನ್ನ ಸೌಂದರ್ಯಕ್ಕೆ ಪದ್ಮಲತೆಯೂ, ಸುಖಲತೆಯೂ ತಕ್ಕವರೇ? ನೀನೂ, ಪದ್ಮಲತೆಯೂ ಎಲ್ಲಿ ಹೋದಿರಿ, ಹೇಳು.

**ಮಾನಸಿಂಹ**—ಅಕ್ಕಾ, ಕಾಡಿನಲ್ಲಿ ನಾನೂ ಅವಳೂ ಓಡಿದೆವು. ನಮ್ಮೆದುರಿನಲ್ಲಿ ಅಶ್ವಾರೋಹಿಗಳ ಗುಂಪೊಂದು ಬಂದುದನ್ನು ಕಂಡು ನಾನು ಕಾಲಿಗೆ ಬುದ್ಧಿ ಹೇಳತೊಡಗಲು ಪದ್ಮಲತೆಯು ನನ್ನನ್ನು ಬಿಡದಂತೆ ಒಂದು ಕುದುರೆಗೆ ಕಟ್ಟುವಂತೆ ಸೈನಿಕನೊಬ್ಬನಿಗೆ ಸಂಜ್ಞೆಮಾಡಿದಳು. ಅವನು ಕೂಡಲೆ ಜೀನುಹಾಕಿ ಸಿದ್ಧವಾಗಿದ್ದುದೊಂದು ಅಶ್ವಕ್ಕೆ ನನ್ನನ್ನು ಬಿಗಿದನು. ಬಹಳದೂರ ಹೋಗುತ್ತಲೂ ಅಲ್ಲೊಂದು ಸುಂದರವಾದ ರಾಜಭವನವು ಸಮೀಪಿಸಲು ಅಲ್ಲಿ ಪದ್ಮಲತೆಯೇ ಮೊದಲಾದವರು ಅಶ್ವದಿಂದಿಳಿದು ನನ್ನನ್ನೂ ಒಳಗೆ ಕರೆದುಕೊಂಡುಹೋದರು ಸುಖಲತೆಯು ಅಲ್ಲಿದ್ದುದೊಂದು ಹಂಸತೂಲಿಕಾತಲ್ಪದಲ್ಲಿ ಜ್ಞಾನಶೂನ್ಯಳಾಗಿ ಮಲಗಿದ್ದಳು. ಅವಳ ಸಮೀಪದಲ್ಲಿ ಜಗಳವಾದ ದಿನ ಒಬ್ಬ ಬಂದಿದ್ದನಲ್ಲಾ, ಅವನು ಬೀಸಣಿಗೆಯಿಂದ ಬೀಸುತ್ತಾ ಕುಳಿತಿದ್ದನು. ಪದ್ಮಲತೆಯು-"ಅಯ್ಯೋ!" ಎಂದು ಸುಖಲತೆಯನ್ನು ತಬ್ಬಿಕೊಂಡು ಅತ್ತಳು. ನಾನೂ ಅವಳಮೇಲೆ ಬಿದ್ದು ಅತ್ತೆನು. ಆಗೊಬ್ಬ ಮೂಢನು ನನ್ನ ಕಿವಿ ಹಿಂಡಿ ಕತ್ತುಹಿಡಿದು ದಬ್ಬಲುಬಂದಾಗ, ಪದ್ಮಲತೆಯು "ಮಾನಸಿಂಹ ಊರಿಗೆ ಹೋಗುತ್ತೀಯಾ? ನೀನು ಹೋಗದಿದ್ದರ ಇಲ್ಲಿರುವವರು ನಿನ್ನನ್ನು ಅನ್ಯಾಯವಾಗಿ ಹೊಡೆದು ಕೊಲ್ಲುವರು" ಎಂದು ಹೇಳಿ, ನನ್ನ ಜವಾಬನ್ನು ನಿರೀಕ್ಷಿಸದೆಯೇ ಕಳುಹಿಸಿಬಿಟ್ಟಳು ಅಕ್ಕಾ, ನಾನೇನು ಮಾಡಲಿ? ನನ್ನನ್ನು ಕರೆದುಕೊಂಡು ಬಂದವನು ದಾರಿಯುದ್ದಕ್ಕೂ ನನ್ನನ್ನು ಹೊಡೆದೊಡೆದು ಅರ್ಧಜೀವ ಮಾಡಿಬಿಟ್ಟ" ಎಂದು ಹೇಳಿ ಬಿಕ್ಕಿಬಿಕ್ಕಿ ಅಳಲಾರಂಭಿಸಿದನು. ಇದನ್ನು ಕೇಳಿದ ಮಂಜುಳೆಯ ತಲೆಯಮೇಲೆ ಸಿಡಿಲು ಬಿದ್ದಂತಾಯಿತು. "ಸುಖಲತೆಯನ್ನು ಅಪಹರಿಸಿದವನು ಚೋರನಲ್ಲ. ಚಿಕನೀರಿನ ಅರಸನಾಗಿರಬೇಕು. ಆಹಾ! ಇನ್ನು ನನ್ನ ಇಷ್ಟಾರ್ಥವು ನೆರವೇರುವದು ದುರ್ಲಭವು. ನಾನಿರುವುದಕ್ಕಿಂತ ಸಾಯುವುದು ಉತ್ತಮವು. ಕಪಟವೇಷಧಾರಿಯಾದ ಚೋರನಿಂದ ಮುದಿಯರಸನು ಮೋಸಹೋದನು. ಚೋರ

ನಾಗಿದ್ದರೆ ಪುಷ್ಪಶಯ್ಯೆಯಲ್ಲಿ ಮಲಗಿಸಿ ರಕ್ಷಿಸುವನೇ ? ಸುಖಲತಾ, ನಿನ್ನದೃಷ್ಟವೇ ಅದೃಷ್ಟ. ನನ್ನ ಪ್ರಯತ್ನವೆಲ್ಲವೂ ವ್ಯರ್ಥವಾದವು. ಇರಲಿ; ನಿನ್ನನ್ನು ಇಷ್ಟಕ್ಕೇ ಬಿಡುತ್ತೇನೆಯೇ ? ನನ್ನಿಂದಾದಷ್ಟು ನಿನ್ನ ಸರ್ವನಾಶಕ್ಕೆ ಪ್ರಯತ್ನಪಡುವೆನು. 'ಕೈ ಕೆಸರಾದರೆ ಬಾಯಿ ಮೊಸರು' ಎನ್ನುವ ಮಾತು ಸುಳ್ಳಲ್ಲ ನಿನ್ನಲ್ಲಿ ದೋಷವ ನ್ನಾರೋಪಿಸುವುದರ ಮೂಲಕ ನಿನ್ನ ಸರ್ವನಾಶಮಾಡದಿದ್ದರ ನನ್ನ ಹೆಸರು ಮಂ ಜುಳೆಯಲ್ಲ. ನಿನ್ನ ತಂದೆಯು ನಿನ್ನನ್ನು ರಕ್ಷಿಸಲಾರನೆನ್ನುವ ಅಪವಾದವನ್ನಾತನಿಗೆ ಹೊರಿಸಬೇಕೆನ್ನುವ ದುರಭಿಪ್ರಾಯದಿಂದ ಮತ್ತೊಬ್ಬರಸನನ್ನು ಮರೆಹೊಕ್ಕಿಯಲ್ಲವೆ? ಗರತಿಯಾದ ನೀನು ಯಾರ ಸಮ್ಮತಿಯೂ ಇಲ್ಲದೆ ಅಂತಃಪುರವನ್ನು ಬಿಟ್ಟು ಹೋದ ಸಾಕ್ಷಿಯೊಂದೇ ಸಾಲದೇ ? ನಿನ್ನನ್ನು ಮನೆಬಿಟ್ಟೋಡಿಸಲು ಇದೊಂದು ಸಾಕ್ಷಿಯೇ ಸಾಕು'' ಎಂದು ಮನದಲ್ಲಿಯೇ ಆಲೋಚಿಸಲಾರಂಭಿಸಿದಳು.

ತನ್ನ ಭವಿಷ್ಯವನ್ನು ತಿಳಿದೂ ತಿಳಿದೂ ಹಳ್ಳಕ್ಕೆ ಬೀಳತಕ್ಕವರೆಷ್ಟೋ ಜನರಿರು ವರು. ಅಂತವರ ಗುಂಪಿನಲ್ಲಿ ಮಂಜುಳೆಯೂ ಒಬ್ಬಳು. ತನಗೆ ಸಂತತಿಯಿಲ್ಲದ್ದ ರಿಂದ ಸುಖಲತೆಯೇ ಪಟ್ಟಾಧಿಕಾರಿಯೆಂಬುದನ್ನು ಅವಳರಿತಿದ್ದರೂ, ಅವಳನ್ನನುಸರಿಸಿ ಇಬ್ಬರೂ ಒಮ್ಮನಸ್ಸಿನಿಂದಿದ್ದಲ್ಲಿ ತಾನು ಸುಖಪಡಬಹುದೆಂಬುದನ್ನು ಅರಿತಿದ್ದರೂ, ತನ್ನ ಪುತ್ರಿಯ ಸುಗುಣಗಳನ್ನೂ, ಅವಳಲ್ಲಿ ಪ್ರಜೆಗಳಿಗಿರತಕ್ಕ ವಾತ್ಸಲ್ಯವನ್ನೂ, ಪೂರ್ಣವಾಗರಿತಿದ್ದರೂ ಹಗಲು ಕಂಡ ಬಾವಿಯಲ್ಲಿ ಇರುಳು ಬೀಳುವಂತೆ ತನ್ನ ಬುದ್ಧಿಶಕ್ತಿಯನ್ನೆಲ್ಲ ಸುಖಲತೆಯ ಸರ್ವನಾಶಮಾಡುವುದರಲ್ಲಿ ಉಪಯೋಗಿಸಿವಳು ದೈವದತ್ತವಾದ ಜ್ಞಾನವನ್ನು ಸನ್ಮಾರ್ಗದಲ್ಲುಪಯೋಗಿಸಿದ್ದಲ್ಲಿ ಇವಳ ಕೀರ್ತಿಲತೆ ಯು ದಶದಿಕ್ಕುಗಳನ್ನೆಲ್ಲಾ ವ್ಯಾಪಿಸುತ್ತಿದ್ದಿತು. ಆದರ ಮಾತ್ಸರ್ಯವೆನ್ನುವ ಗುಣವು ಯಾವಾಗ ಮನದಲ್ಲಿ ಕಾಲಿಟ್ಟಿತೋ, ಅಂದೇ ಅವಳೊಡಸಿದ್ದ ಸಕಲ ಸದ್ಗುಣಗಳೂ ನಾಶವಾಗುವುದರಲ್ಲಿ ಸಂಶಯವಿಲ್ಲ ಮಾತ್ಸರ್ಯದಲ್ಲೂ 'ಸವತೀಮಾತ್ಸರ್ಯ'. ಇದಕ್ಕಿ ರುವ ಶಕ್ತಿಯು ಎಂತಹ ಕ್ರೂರವಾದ ಪಾಷಾಣಕ್ಕೂ ಇಲ್ಲವೆನ್ನಬಹುದು. ಇಂತಹ ಕಾಲಕೂಟ ವಿಷವು ಮಂಜುಳೆಯ ಹೃದಯವನ್ನು ಹೊಕ್ಕಕೂಡಲೇ ಅವಳಲ್ಲಿ ಅಪ ರೂಪವಾಗಿದ್ದ ಸದ್ಗುಣಗಳೆಲ್ಲವೂ ಒಂದೊಂದಾಗಿ ಸೂರ್ಯನನ್ನು ಕಂಡಂಜಿ ಓಡುವ ಹಿಮದಂತೆ ಓಡಲಾರಂಭಿಸಿದವು.

ಅಮರಸಿಂಹನು ಮಂಜುಳೆಯ ನಡತೆಯಲ್ಲಿನ ಬದಲಾವಣೆಯನ್ನು ಕಂಡಾಶ್ಚ ರ್ಯಪಟ್ಟನು. ಕೆಲವು ದಿನಗಳಿಂದ ಮಂಜುಳೆಯು ಅರಸನನ್ನು ಕಂಡಾಗ ಮರ್ಯಾದೆ

ಮಾಡದೆಯೂ, ಮಾತನಾಡದೆಯೂ, ಹುಬ್ಬುಗಂಟಿಕ್ಕಿದ ಮುಖದಿಂದಲೂ ಇದ್ದಳು ನೋಟ್ಟಮೊದಲು ಅರಸನು ಅವಳ ಅಹಂಕಾರದ ಕಡೆ ಲಕ್ಷ್ಯಕೊಡಲಿಲ್ಲ ಆ ದಿನ ಮಂಜುಳೆಯ ಕೋಪದ ಕಾರಣವನ್ನು ಕೇಳಿ ತಿಳಿಯೋಣವೆಂದು ಬಂದಾಗ ಅಕ್ಕನೂ ತಮ್ಮನೂ ಸಂಭಾಷಿಸುತ್ತಿದ್ದುದನ್ನು ಮರೆಯಲ್ಲಿ ನಿಂತು ಕೇಳಿದ್ದರಿಂದ ಎಲ್ಲ ವಿಷಯಗಳೂ ಪರಿಷ್ಕಾರವಾಗಿ ತಿಳಿದುಬಂದು "ಈಗ ಮಂಜುಳೆಯನ್ನು ನೋಡಲುಹೋದರೆ ಅವಳು ಸಂಶಯ ಹೊಂದುವಳು ಎಲ್ಲ ವಿಷಯಗಳನ್ನೂ ದೀರ್ಘವಾಗಿ ವಿಚಾರಿಸಿ ತಿಳಿದುಕೊಂಡು ಮುಂದಿನ ತೀರ್ಮಾನಮಾಡೋಣ ನನ್ನ ಪ್ರಿಯಪುತ್ರಿಯು ಜೀವಿಸಿರುವಳೇ! ಬಿಕನೀರಿನ ಬಳಿಯಿರುವಳೆಂದು ಅವರು ಮಾತನಾಡಿಕೊಂಡರು. ಸರ್ವಜೀವಶರಣ್ಯನಾದ ಭಗವಂತನು ಅವರನ್ನು ರಕ್ಷಿಸಲಿ. ಶತ್ರುವು ಮಿತ್ರನಾಗುವುದೂ, ಮಿತ್ರನು ಶತ್ರುವಾಗುವುದೂ ಸರ್ವೇಶ್ವರನ ಇಚ್ಛೆಯು. ನನ್ನ ಕೋಪದಿಂದುಂಟಾದ ಅನರ್ಥವಿದು ಆದುದರಿಂದಲೇ ಜ್ಞಾನಿಗಳು 'ಕೋಪಚಂಡಾಲಿ' ಎಂದು ಸಾರಿರುವರು ಇನ್ನಾದರೂ ತಾಳ್ಮೆಯನ್ನು ವಹಿಸೋಣ ಮಂಜುಳೆಯ ಮೇಲಿನ ಮೋಹದಿಂದ ಮಗಳನ್ನು ನಿರಾಕರಿಸಿದೆನು ಭಗವಂತಾ! ವೃದ್ಧನಾದ ನನ್ನನ್ನಲ್ಲಗಳೆಯಬೇಡ, ನನ್ನ ಪ್ರಿಯ ಪುತ್ರಿಯನ್ನು ಕಷ್ಟದಿಂದ ಪಾರು ಮಾಡಿ ರಕ್ಷಿಸು" ಎಂದು ಭಗವಧ್ಯಾನಮಾಡುತ್ತಾ ತನ್ನರಮನೆಯ ಕಡೆ ಹೊರಟನು



## ಹನ್ನೊಂದನೆಯ ಅಧ್ಯಾಯವು

### ಮನೋಭ್ರಾಂತಿ



ಪ್ರಿಯ ಸಹೋದರೀ, ನಾನಾರೆಂಬುದನ್ನು ಬಲ್ಲೆಯಾ? ನನ್ನನ್ನೇಕೆ ಆಶ್ಚರ್ಯದಿಂದ ನೋಡುವೆ? ನೀನು ಭ್ರಮೆಗೊಂಡಿರುವ ನಿನ್ನ ದೇಹಸ್ಥಿತಿಯು ಹೇಗಿರುವುದು ಎಚ್ಚರವಾಗಿದ್ದೂ ಜ್ಞಾನಶೂನ್ಯಳಾಗಿರುವೆ. ಭೀತಿಯನ್ನು ತ್ಯಜಿಸು, ಬಾಯಿಬಿಟ್ಟು ಮಾತನಾಡು, ನಾನು ನಿನ್ನ ಆಪ್ತಮಿತ್ರಳಲ್ಲವೇ? ನಿನ್ನ ಜನಕನು ಇಲ್ಲಿಲ್ಲ ಚಿಕ್ಕಮ್ಮನೂ ಇಲ್ಲ. ನಾನು ನೀನಿಬ್ಬರು ಮಾತ್ರ ಏಕಾಂತಗೃಹದಲ್ಲಿರುವೆವು ನನ್ನನ್ನು ಕಂಡ ಕೂಡಲೇ ನೀನು ಪರಮಾನಂದ ಭರಿತಳಾಗುತ್ತಿದ್ದೆ. ಅದನ್ನೆಲ್ಲ ಈಗ ಮರತೆಯಾ? ಮರ್ತ್ಯಲೋಕವಾಸವು ನಿನಗೆ ರುಚಿಸಲಿಲ್ಲವೇ? ನನ್ನನ್ನು ಕಾಣದಿದ್ದರಾದರೂ ನೀನು ಸೌಖ್ಯವಾಗಿರುತ್ತಿದ್ದೆ. ಈ ದುರಾದೃಷ್ಟವಂತಳನ್ನು ನೋಡಬಾರದೆಂದು ಕಣ್ಣುಮುಚ್ಚಿ

ಕೊಂಡು ಮಲಗಿರುವೆಯಾ?-ಎಂದೀರೀತಿ ಯುವತಿಯೊಬ್ಬಳು ನಿಶ್ಚೇಷ್ಟಿತಳಾಗಿ ಮಲಗಿದ್ದ ಮತ್ತೊಬ್ಬ ರಮಣಿಯ ಸಮೀಪದಲ್ಲಿ ಕುಳಿತು ದುಃಖಿಸುತ್ತಿದ್ದಳು.

ಬಾಡಿದ ಮುಖವುಳ್ಳ ಯುವಕನೊಬ್ಬನು ಸದ್ದು ಮಾಡದೆ ಮೆತ್ತಗೆ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತ ಮಲಗಿದ್ದ ತರುಣಿಯ ಸಮೀಪಕ್ಕೆ ಬಂದು ಕುಳಿತು ಮಲಗಿದ್ದ ರಮಣಿಯ ಮುಖವನ್ನು ವೀಕ್ಷಿಸಿನೋಡುತ್ತ ಮತ್ತೊಬ್ಬ ರಮಣಿಯನ್ನು ನೋಡಿ "ಪದ್ಮ, ಈಶ್ವರನಿಚ್ಛೆಯು ಹೇಗಿರುವುದೆನ್ನುವುದನ್ನು ನೀನು ಹೇಳಬಲ್ಲೆಯಾ" ಎಂದು ಕಂಬನಿದುಂಬಿ ಕೇಳಿದನು ಮೇಲೆ ಹೇಳಿದಂತೆ ಸಂಭಾಷಿಸಿದವರು ಸರ್ದಾರ್‌ಸಿಂಹ ಪದ್ಮಲತೆಯರು ಮಲಗಿದ್ದ ರಮಣಿಯು ಸುಖಲತೆಯು ಎನ್ನುವುದನ್ನು ವಾಚಕರಿಗಿಲ್ಲಿ ಪರಿಚಯಮಾಡಿಕೊಡಬೇಕಾದುದಿಲ್ಲ ಮೇಲೆ ಹೇಳಿದಂತೆ ಸರ್ದಾರ್‌ಸಿಂಹನು ಕೇಳಲು ಪದ್ಮಲತೆಯು ದುಃಖದಿಂದ ಕೆಲಹೊತ್ತಿನವರಗೂ ಮಾತನಾಡಲಾರದೆ ಮೌನವಾಗಿದ್ದಳು. ತನ್ನ ದುಃಖವನ್ನು ಮಹಾರಾಜನು ಕಂಡರ ಮತ್ತಿಷ್ಟು ಅಧೈರ್ಯಗೊಳ್ಳುವನೆಂದೂಹಿಸಿ ಕಪಟಧೈರ್ಯದಿಂದ ಅವನ ಪ್ರಶ್ನೆಗುತ್ತರವನ್ನು ಕೊಡಲಾರಂಭಿಸಿದಳು

**ಪದ್ಮಲತೆ**—ಮಹಾರಾಜ, ಧೈರ್ಯವನ್ನು ಕೈಬಿಡಬೇಡಿ, ರಾಜಕುಮಾರಿಯಿಂದ ಎಲ್ಲರಿಗೂ ಪೂರ್ಣಸುಖವೂ, ಸಂತೋಷವೂ ದೊರೆಯುವುದೆಂದಿದ್ದು ನಿರೀಕ್ಷಿಸಿದ್ದೆವು. ನಿಷ್ಪ್ರಯೋಜನವಾಗುವುದೆಂದು ತೋರುವುದು ಇದರಿಂದಲೇ ಮನುಷ್ಯನಿಚ್ಛೆಯು ಒಂದಾದರ ದೈವೇಚ್ಛೆಯೇ ಬೇರಾಗುವುದು ಎಂಬ ನಾಣ್ಣುಡಿಯುಂಟಾಗಿರುವುದು ನಾವೂ ಅದೇ ಮನುಷ್ಯವರ್ಗಕ್ಕೆ ಸೇರಿದವರಾದ್ದರಿಂದ ನಮ್ಮಿಚ್ಛೆಯುಮಾತ್ರ ಬೇರಾಗುವುದೇ? ಮಾನವನ ಸ್ಥೈರ್ಯ ಧೈರ್ಯ ಪರೀಕ್ಷೆಗಾಗಿ ಭಗವಂತನು ನಾನಾವಿಧವಾದ ಕಷ್ಟಗಳನ್ನೇರ್ಪಡಿಸಿರುವನು ಧೈರ್ಯಲಕ್ಷ್ಮಿಯ ಉಪಾಸಕನು ಆ ಕಷ್ಟಗಳನ್ನು ತೃಣವಾಗೆಣಿಸಿ ಈ ಜಗತ್ಸಮುದ್ರದಲ್ಲಿ ಈಜಿ ನಿರಪಾಯನಾಗಿ ದಡವನ್ನು ಸೇರಿ ಭಗವತ್ಪ್ರೀತಿಗೆ ಪಾತ್ರನಾಗುವನು. ಹೇಡಿಯಾದವನು ಈಜಲಾರದೆ ಸದಾ ದುಃಖಿತನಾಗುವನು ಇದು ನಾವೆಲ್ಲರೂ ಅರಿತ ವಿಷಯವಷ್ಟೆ ನಮ್ಮ ಶಕ್ತಿಯಿದ್ದಷ್ಟು ಪ್ರಯತ್ನ ಮಾಡಿಪೆವಾದರೆ ಫಲವು ಭಗವದಿಚ್ಛೆಯಿದ್ದಂತಾಗಲಿ ರಾಜೇಂದ್ರ, ಈಗ ರಾಜಕುಮಾರಿಯ ಅಸ್ವಸ್ಥತೆಯನ್ನು ಬಹಿರಂಗಪಡಿಸಿ ಚಿಕಿತ್ಸೆ ಮಾಡಿಸೋಣವೆಂದರ ಅದರಲ್ಲಿ ನಾನಾವಿಧವಾದ ಧರ್ಮಸಂಕಟಗಳಿರುವವು. ತಮ್ಮ ದೇಶದವರು-ಮಹಾರಾಜನು ಉನ್ಮತ್ತಳೊಬ್ಬಳಲ್ಲಿ ಮೋಹಗೊಂಡು ಭ್ರಮೆಗೊಂಡಿರುವನೆಂದು ಅವಹೇಳನವಾ

ಡುವರು. ನಮ್ಮ ರಾಜ್ಯದವರು ಕಳ್ಳತನದಿಂದಪಹರಿಸಿದ ಸ್ವತ್ತು ದಕ್ಕುವುದೇ ! ಎಂದು ಹಾಸ್ಯಮಾಡುವರು. ಇತರ ದೇಶದವರು ನಾನಾವಿಧವಾದ ದೂಷಣೆಗಳನ್ನಾರೋಪಿಸಿ ಹಾಸ್ಯಮಾಡಿ ನಗುವರು. ನನ್ನ ಪ್ರಿಯಮಿತ್ರಳಿಗೆ ಇಂತಹ ವಿಪತ್ತುಂಟಾಗುವುದೆಂದು ನಾನು ಕನಸಿನಲ್ಲಿಯೂ ಕೂಡ ಸ್ಮರಿಸಲಿಲ್ಲ. ಅವಳು ಹುಟ್ಟಿದ್ದು ಮೊದಲು ಒಂದು ದಿನವೂ ಅಸ್ವಸ್ಥಳಾದುದೇ ಇಲ್ಲ. ಅಕಸ್ಮಾತ್ತಾಗಿ ನಡೆದ ಸಂಭವಗಳನ್ನು ಕಂಡಂಜಿ ಭ್ರಮಿಸಿರುವಳು. ನಮ್ಮಿಂದಾದ ಪ್ರಯತ್ನ ಮಾಡೋಣ. ಮುಂದೆ ದೇವದೇವನಿಚ್ಛೆಯಿದ್ದಂತಾಗಲಿ. ರೋಗವು ಗುಣವಾಗುವುದಕ್ಕೂ, ಹೆಚ್ಚಾಗುವುದಕ್ಕೂ ಅವನೇ ಕಾರಣನು. ನೀವು ಮಾತ್ರ ಧೈರ್ಯದಿಂದಿರಿ.

**ಸರ್ದಾರ್ ಸಿಂಹ-** ಪದ್ಮ, ಹರಿಣಬೇಟೆಗಾಗಿ ಬಂದವನಿಗೆ ಹರಿಣದ ಬದಲು ಹರಿಣಾಕ್ಷಿಯ ಬೇಟೆಯು ದೊರೆಯಿತು. ಸುಖಲತೆಯನ್ನು ನಾನು ನೋಡದೆಯೇ ಇರಬಾರದಾಗಿತ್ತೇ? ನನ್ನನ್ನು ನೋಡಿದ್ದರಿಂದಲ್ಲವೇ ಈ ರೀತಿಯಾದ ಕಷ್ಟಕ್ಕೊಳಗಾಗಬೇಕಾಯಿತು ಅವಳ ತಂದೆಯಾಡಿದ ಮಾತುಗಳನ್ನು ನೀನು ಕೇಳಿದೆಯಲ್ಲವೇ ? ಪಶ್ಚಿಮ ಸಮುದ್ರ ತೀರಕ್ಕವನನ್ನು ಕಳುಹಿಸುತ್ತೇನೆಂದು ಹೇಳಿದ ಕೂಡಲೇ ನನ್ನ ಮನಸ್ಸಿಗೆ ಬಹಳ ಸಂಕಟವಾದುದರಿಂದಲ್ಲವೇ ಅವಳನ್ನು ನಾನು ಅಪಹರಿಸಿದೆನು? ನನ್ನಲ್ಲಿ ಕೋಪಗೊಂಡಿರುವಳೆಂದು ನಂಬುವುದಕ್ಕೂ ಅವಕಾಶವಿಲ್ಲ.

**ಪದ್ಮಲತೆ-**ಮಹಾರಾಜ ತಾವು ಅವಳಿಗೆ ಉಪಕಾರಮಾಡಿರುವಾಗ ತಮ್ಮಲ್ಲಿ ಕೋಪಗೊಳ್ಳಲು ಕಾರಣವಿಲ್ಲ. ಆದುದರಿಂದ ಸಂಶಯವನ್ನು ಬಿಡಿ. ನಡೆದ ವಿಷಯಗಳನ್ನು ಪ್ರತಾಪಸಿಂಹ, ಸುಖಲತೆ, ನೀವು, ನಾನು, ಮಾನಸಿಂಹ ಈ ಐದು ಜನರುಮಾತ್ರ ಬಲ್ಲೆವು. ನೀವು ಚಿಂತೆಯನ್ನು ಬಿಟ್ಟು ಸುಖಲತೆಯು ಪೂರ್ಣಾರೋಗ್ಯದಿಂದೆದ್ದ ಕೂಡಲೇ ನಡೆದ ವರ್ತಮಾನಗಳನ್ನು ಸಕಲರೂ ಅರಿಯುವಂತೆ ಪ್ರಸಿದ್ಧಪಡಿಸಿ, ಅವಳನ್ನು ವಿವಾಹವಾಗಿ ಸೌಖ್ಯವಾಗಿ ಬಾಳಿರಿ. ಅವಳು ಸೌಖ್ಯಹೊಂದದೆ ಹೀಗೆಯೇ ಮರಣಹೊಂದುವ ಪಕ್ಷದಲ್ಲಿ ಯಾರಿಗೂ ತಿಳಿಯದೆ ಅವಳ ಉತ್ತರಕ್ರಿಯಾದಿಗಳನ್ನು ನೆರವೇರಿಸಿ ನಮ್ಮ ಕರ್ತವ್ಯವನ್ನು ಪೂರೈಸೋಣ. ಪ್ರತಾಪಸಿಂಹನು ಸತ್ಯವಂತನು; ಮಾನಸಿಂಹನು ಉನ್ಮತ್ತನು; ಸುಖಲತೆಯವಿಷಯವನ್ನಿಲ್ಲಿ ಹೇಳಬೇಕಾದುದೇ ಇಲ್ಲ. ಉಳಿದವರು ನಾವಿಬ್ಬರು. ಆದುದರಿಂದ ಅನುಕೂಲ ಪ್ರತಿಕೂಲಗಳನ್ನು ನಮ್ಮನುಕೂಲದಂತೆ ಮಾಡೋಣ.

**ಸರ್ದಾರ್ ಸಿಂಹ**-ಪದ್ಮಲತಾ, ನೀನತಿ ವಿವೇಕವಂತಳು. ಈ ವಿಷಯಗಳನ್ನೆಲ್ಲಾ ದೀರ್ಘವಾಗಿ ಯೋಚನೆಮಾಡಿಯೇ ನಾನಿಲ್ಲಿಗವಳನ್ನು ಕರೆದುತಂದೆನು. ಇದು ನನ್ನ ತಂದೆಯು ಏಕಾಂತವಾಗಿ ವಾಸಮಾಡುತಿದ್ದ ಗೃಹವು. ಇದರಲ್ಲಿನ ಮುಖ್ಯ ವಿಶೇಷವೇನಂದರೆ—ವನಮೂಲಿಕೆ, ಔಷಧಿ, ಸಿಂಧೂರಾದಿಗಳಿಂದ ಕಟ್ಟಲ್ಪಟ್ಟದೊಂದು ಕೊಠಡಿ ಇರುವುದು. ಅಲ್ಲಿದ್ದುಕೊಂಡು ನನ್ನ ತಂದೆಯು ವೇದಾಂತ ವಿಷಯಗಳನ್ನು ವಿಮರ್ಶೆಮಾಡುತಿದ್ದರು ಆ ಕೊಠಡಿಯಲ್ಲಿ ಮಲಗಿಸಿದರಾದರೂ ಸುಖಲತೆಯು ಗುಣಹೊಂದುವಳೋ ಏನೋ ಎನ್ನುವುದು ನನ್ನ ಭ್ರಾಂತಿ. ಈ ಬೀಗದ ಕೈಯನ್ನು ತೆಗೆದುಕೊಂಡು ಹೋಗಿ ಆ ಕೊಠಡಿಯ ಬಾಗಿಲನ್ನು ತೆರೆದು, ಆ ಕೊಠಡಿಯನ್ನು ಶುದ್ಧ ಮಾಡು.

ಪದ್ಮಲತೆಯು ಸರ್ದಾರ್‌ಸಿಂಹನು ಹೇಳಿದಂತೆ ಆ ಕೊಠಡಿಯನ್ನು ತೆರೆದು ಶುದ್ಧಮಾಡಿದಳು ಪದ್ಮಲತೆಯು ಆ ಸ್ಥಳವನ್ನು ಬಿಟ್ಟು ಹೋದಕೂಡಲೇ ತಡೆದಿದ್ದ ರಾಜಕುಮಾರನ ದುಃಖವು ಮಿತಿಮೀರಿ ಪ್ರವಹಿಸಲಾರಂಭಿಸಿತು. ಸುಖಲತೆಯ ಸಮೀಪಕ್ಕೆ ಹೋಗಿ—"ಮನೋರಂಜಿನೀ, ಮೃದುಭಾಷಿಣೀ, ಬಾಯ್ಬಿಟ್ಟು ನನ್ನ ದುಃಖಶಮನವಾಗುವಂತೆ ಒಂದು ಮಾತನಾಡಲಾರೆಯಾ? ನನ್ನ ಮನೋದುಃಖವನ್ನು ನಿವೃತ್ತಿಮಾಡಲಾರೆಯಾ?" ಎಂದು ಸುಖಲತೆಯ ಕರಗಳೆರಡನ್ನೂ ಹಿಡಿದುಕೊಂಡು ಚಿಕ್ಕಮಗುವಿನಂತೆ ಬಹಳ ಹೊತ್ತು ದುಃಖಿಸಿ, ತನ್ನ ಮನೋವಲ್ಲಭೆಯ ಪ್ರಾಣವನ್ನುಳಿಸುವಂತೆ ಭಗವಂತನನ್ನು ಮನಃಪೂರ್ವಕವಾಗಿ ಭಕ್ತಿಯಿಂದ ಪಾಷಾಣವು ಕೂಡ ಕರಗಿ ನೀರಾಗುವಂತೆ ಪ್ರಾರ್ಥಿಸಿದನು ಇಷ್ಟರಲ್ಲೇ ಪದ್ಮಲತೆಯು ಪುನಃ ಬಂದು ರಾಜಕುಮಾರನ ದೈನ್ಯಾವಸ್ಥೆಯನ್ನು ಕಂಡು ಮನಮರುಗಿದವಳಾಗಿ ದುಃಖವನ್ನು ತಡೆದು, ಧೈರ್ಯವನ್ನು ವಹಿಸುವಂತೆ ಹೇಳಲು, ರಾಜಕುಮಾರನು ತಡೆಯಲಸಾಧ್ಯವಾದ ದುಃಖವನ್ನು ನುಂಗಿಕೊಂಡು ಪದ್ಮಲತೆಯಕಡೆ ತಿರುಗಿ--'ಪದ್ಮಲತಾ, ನಮ್ಮ ಪ್ರಯತ್ನವು ಪ್ರಯೋಜನವಾಗುವಂತಿಲ್ಲ. ಈ ಮಂಚದ ಒಂದು ಭಾಗವನ್ನು ನೀನು ಹಿಡಿ, ಮತ್ತೊಂದು ಪಕ್ಕವನ್ನು ನಾನು ಹಿಡಿಯುತ್ತೇನೆ. ಇಬ್ಬರೂ ಸೇರಿ ಆ ಕೊಠಡಿಗೆ ತೆಗೆದುಕೊಂಡು ಹೋಗೋಣ, ನನ್ನ ತಂದೆಯ ಸತ್ಪುತ್ರನು ನಾನಾಗಿರುವುದು ಸತ್ಯವಾಗಿದ್ದರೆ, ನನ್ನಲ್ಲಿ ನನ್ನ ಜನಕನಿಗೆ ವಿಶ್ವಾಸವಿರುವುದು ಸತ್ಯವಾದರೆ, ಸುಖಲತೆಗೆ ಪ್ರಾಪ್ತವಾಗಿರುವ ವಿಪರೀತ ರೋಗವು ಕ್ಷಿಪ್ರದಲ್ಲಿಯೇ ಗುಣವಾಗುವುದು. ನಾನೂ ಉತ್ತಮವೈದ್ಯರನ್ನು ಹುಡುಕಿ ಕರೆದುತರುವಂತೆ ಆಳನ್ನು ಕಳುಹಿಸಿರುವೆನು. ನೀನೂ ನಾನೂ ಅಲ್ಲದೆ, ರಾಜಕುಮಾರಿಯ ಕ್ಷೇಮಾಭಿಲಾಷಿ

ಗಳು ಮತ್ತಾರೂ ಇಲ್ಲ. ಆಪತ್ಕಾಲಕ್ಕೊದಗಿದವರೇ ಆಪ್ತ ಬಂಧುಗಳೆನಿಸುವರು. ಪ್ರತಿಫಲಾಪೇಕ್ಷೆಯಿಲ್ಲದೆ ನಿನ್ನ ಮಿತ್ರಳಿಗಾಗಿ ನೀನು ವಹಿಸಿರುವ ಶ್ರದ್ಧೆಯನ್ನು ಭಗವಂತನು ಅರಿತಿರುವನಾದುದರಿಂದ ನಿನ್ನಿಂದವಳಿಗೆ ಸುಖವುಂಟಾಗುವುದೆನ್ನುವುದರಲ್ಲಿ ಸಂಶಯವಿಲ್ಲ. ನಾನು ಪ್ರತಿಫಲಾಪೇಕ್ಷೆಯಿಂದವಳಿಗೆ ಸಹಾಯವಮಾಡಿದವನಾದೆನು. ಅವಳನ್ನು ಬದುಕಿಸಿದಲ್ಲಿ ಅವಳು ನನ್ನ ಸತಿಯಾಗುವಳೆನ್ನುವ ಕುತೂಹಲದಿಂದವಳಿಗೆ ಸಹಾಯವಮಾಡಲೊಪ್ಪಿದ್ದರಿಂದ ನನಗಿಂತ ನಿನಗೆ ಅವಳ ವಿಷಯದಲ್ಲಿ ಹೆಚ್ಚು ಶ್ರದ್ಧೆಯಿರುವುದು ವ್ಯಕ್ತವಾಗುವುದು. ನೀನಾದರೆ ಅವಳಿಂದ ಯಾವ ಪ್ರತಿಫಲವನ್ನೂ ನಿರೀಕ್ಷಿಸಿದವಳಲ್ಲ. ಪದ್ಮ, ನಿನಗಾಗಿಯಾದರೂ ಈಶ್ವರನು ನಿನ್ನೊಡತಿಯನ್ನು ರಕ್ಷಿಸುವನು'' ಎಂದು ಹೇಳಿ ಮಂಚಸಹಿತವಾಗಿ ಸುಖಲತೆಯನ್ನು ಮೂಲಿಕೆಯಿಂದ ನಿರ್ಮಿಸಲ್ಪಟ್ಟ ಕೊಠಡಿಗೆ ಕರೆದುಕೊಂಡು ಹೋದರು.

ಸುಖಲತೆಯನ್ನು ಆ ಕೊಠಡಿಯಲ್ಲಿ ಮಲಗಿಸಿ ಬಹಳಹೊತ್ತು ರಾಜಕುಮಾರನಾಗಲಿ ಪದ್ಮಲತೆಯಾಗಲಿ ಮಾತನಾಡಲಿಲ್ಲ. ಕೊನೆಗೆ ಪದ್ಮಲತೆಯು ಈ ರೀತಿಯಾದ ಮೌನದಿಂದ ರಾಜಕುಮಾರನ ದುಃಖವು ಹೆಚ್ಚುವುದೆಂದು ತಿಳಿದು, ತನ್ನ ದುಃಖವನ್ನು ನುಂಗಿಕೊಂಡು—'ರಾಜಾಧಿರಾಜಾ, ತಾವಿಲ್ಲಿದ್ದರೆ ರಾಜಕಾರ್ಯಗಳನ್ನು ನೋಡುವರಾರು? ಬಿಕನೀರಿನ ಪ್ರಜೆಗಳು ತಮ್ಮನ್ನು ದೂರದಂತೆ ಅವರ ಕಷ್ಟಸುಖಗಳನ್ನರಿತು ಅದಕ್ಕೆ ತಕ್ಕ ವ್ಯವಸ್ಥೆಮಾಡಿ. ಸುಖಲತೆಯ ದೇಹಸ್ಥಿತಿಯ ವಿಷಯವನ್ನು ನಾನು ನೋಡಿಕೊಳ್ಳುವೆನು. ತಮಗೆ ವಿರಾಮ ದೊರೆತಾಗ ಇಲ್ಲಿಗೆ ಬಂದು ಹೋಗಬಹುದು'' ಎಂದಳು.

ಅದಕ್ಕೆ ಸರ್ದಾರ್‌ಸಿಂಹನು--'ಪದ್ಮಾ. ಪ್ರತಾಪಸಿಂಹನು ವಿವೇಕವಂತನು. ನಾನಿದ್ದು ನೋಡಿಕೊಳ್ಳುವಂತೆ ರಾಜಕಾರ್ಯವೆಲ್ಲವನ್ನೂ ಶ್ರದ್ಧೆಯಿಂದ ನೋಡಿಕೊಳ್ಳುವನು. ಮುಖ್ಯವಾದ ವಿಷಯಗಳಿದ್ದರೆ ನನ್ನೊಡನೆ ಆಲೋಚಿಸದೆ ನಡೆಸಲಾರನು. ಆದುದರಿಂದ ನೀನೀ ವಿಷಯದಲ್ಲಿ ಚಿಂತೆಪಡಬೇಡ ರಾಜಕುಮಾರಿಯು ಅಪಾಯಸ್ಥಿತಿಯನ್ನು ಅರಿತಿದ್ದೂ ಅವಳನ್ನೊಂಟಿಯಾಗಿಬಿಟ್ಟು ಹೋಗಲು ಮನಸ್ಸಾಗುವುದೇ? ಈಶ್ವರೇಚ್ಛೆಯು ಹೇಗಿರುವುದೋ?' ಎಂದು ಹೇಳಿ ಕಣ್ಣೀರು ಸುರಿಸಲಾರಂಭಿಸಿದನು.

ಬಿರುಗಾಳಿಯು ಬೀಸತೊಡಗಿತು. ಧೂಳು ಭೂಮ್ಯಾಕಾಶವೆಲ್ಲವನ್ನಾವರಿಸಿತು. ನಾನಾದಿಕ್ಕಿಗೆ ಚೆದರಿದ್ದ ಮೇಘವೆಲ್ಲವೂ ಶತ್ರುಗಳನ್ನು ಧ್ವಂಸಮಾಡಲು ಒಂದುಗೂಡುವ ಸೈನ್ಯಸಮೂಹದಂತೆ ಒಂದುಗೂಡಿ, ಆನೆಕಲ್ಲು ಮಳೆಯಿಂದ ಭೂಮಿಯನ್ನು ಧ್ವಂಸ

ಮಾಡತೊಡಗಿ ಭೂಮಿಗೂ, ಆಕಾಶಕ್ಕೂ ಸಂಬಂಧವಿರುವುದೆಂಬುದನ್ನು ವ್ಯಕ್ತಗೊಳಿಸಿತು. ದಾರಿಯೆಲ್ಲವೂ ಪ್ರವಾಹಮಯ. ಗುಡುಗು, ಮಿಂಚು, ಸಿಡಿಲುಗಳು ಜನರನ್ನು ಭೀತಿಗೊಳಿಸಿದವು. ಎಲ್ಲೆಲ್ಲಿಯೂ ಘೋರಾಂಧಕಾರವು ವ್ಯಾಪಿಸಿತು. ಬಿರುಗಾಳಿಯೊಡನೆದುರಿಸಲಸಮರ್ಥವಾದ ದೀಪಗಳು ಸೋತು ತಣ್ಣಗಾದವು. ಇಂತಹ ಘೋರಸಂಭವವನ್ನು ಸರ್ದಾರ್‌ಸಿಂಹ, ಪದ್ಮಲತೆ, ಸುಖಲತೆ ಮೊದಲಾದವರು ಅನುಭವಿಸುತಿದ್ದರು. ಸುಖಲತೆಯು ಸತ್ತವಳೂ ಅಲ್ಲ, ಇದ್ದವಳೂ ಅಲ್ಲವಾದುದರಿಂದ ಸುಖದುಃಖಗಳೊಂದೂ ಅವಳನ್ನು ಬಾಧಿಸುತ್ತಿರಲಿಲ್ಲ. ಮಳೆಯ ಉಪದ್ರವವನ್ನೂ ರಾಜಕುಮಾರನ ಚಿಂತೆಯನ್ನೂ ಕಂಡು ನಿಟ್ಟುಸಿರು ಬಿಟ್ಟಳು. "ಅನಾಥರಕ್ಷಕಾ, ದೀನಪೋಷಕಾ, ನಮ್ಮ ಮಹಾರಾಜರನ್ನೂ, ಮಹಾರಾಣಿಯಾದ ಮಂಜುಳಾದೇವಿಯನ್ನೂ ರಕ್ಷಿಸು. ಮಂಜುಳಾ, ನೀನು ಸಂತೋಷದಿಂದಿರು. ರಾಜಕುಮಾರಿಯು ಈ ರೀತಿಯಾದ ಕಷ್ಟವನ್ನನುಭವಿಸುವುದು ನ್ಯಾಯವೇ ? ಕಪಟರಹಿತಳಾದ ಕಾಮಿನಿಯನ್ನು ಭಗವಂತನು ಈರೀತಿ ಪರೀಕ್ಷಿಸುವುದು ಆತನ ಕುಟಿಲತಂತ್ರಗಳಲ್ಲೊಂದುಬಗೆಯಲ್ಲದೆ ಬೇರಲ್ಲ. ಅಹಂಕಾರದ ಮೂರ್ತಿಯಾದ ನಿನ್ನನ್ನು ಇಂತಹ ಉತ್ತಮ ಪದವಿಯಲ್ಲಿಟ್ಟಿರುವುದೂ ಒಂದು ಬಗೆಯಾದ ಯುಕ್ತಿಧರ್ಮವು. ಈ ರಾತ್ರಿಯೇ ನಮ್ಮ ಅವಸಾನಕಾಲವು, ಅನಾಥರಾಗಿ ಮರಣಹೊಂದುವ ದುರ್ದಿನವು. ರಾಜಕುಮಾರನು ನಿರಾಶೆಯಿಂದ ಮಲಗಿಬಿಟ್ಟನು. ನಾನೊಂದು ಜೀವಪ್ರೇತ, ನನಗೇಕೆ ಮರಣವುಂಟಾಗುವುದು? ಬೇಕಾದ ಸುಖದುಃಖಗಳನ್ನೆಲ್ಲಾ ಅನುಭವಿಸಲು ಈಶ್ವರನು ನನಗೆ ಬಲವನ್ನು ಕೊಟ್ಟಿರುವನಾದ್ದರಿಂದ ನನಗೆ ಕಷ್ಟವೆಲ್ಲಿಂದ ಬರಬೇಕು?' ಎಂದು ಹೇಳಿಕೊಂಡು ಸುರಿಯುತ್ತಿರುವ ಕಣ್ಣೀರನ್ನು ಸೀರೆಯ ಸೆರಗಿನಿಂದೊರಸಿಕೊಂಡು ನೆಲದ ಮೇಲೆ ತಾನೂ ಮಲಗಿಬಿಟ್ಟಳು.



# ಹ ನ್ನೆ ರ ಡ ನೆ ಯ ಅ ಧ್ಯಾ ಯ ವು .



## ಮಂತ್ರಿಗಳ ತೀರ್ಮಾನವು.

ರಾಜಾ ಅಮರಸಿಂಹನು ಎಷ್ಟೆಷ್ಟು ವಿಧವಾಗಿ ಆಲೋಚಿಸಿದರೂ ತನ್ನ ವೃದ್ಧಾಪ್ಯದ ದೆಸೆಯಿಂದ ಸರ್ದಾರ್‌ಸಿಂಹನೊಡನೆ ಕಾದುವುದು ನಿಷ್ಪ್ರಯೋಜನವೆಂದರಿತನು ಆದರೂ ಕಪಟದಿಂದ ತನ್ನ ಕುಮಾರಿಯನ್ನಪಹರಿಸಿದ್ದನ್ನು ನೆನೆಸಿದಾಗ ಮಾತ್ರ ಕೋಪವು ಉಕ್ಕಿ ಬರುತಿದ್ದಿತು. ಆದರೆ ಮಾಡುವುದೇನು? ತರುಣೀ ತರುಣರು ಸಂಧಿಸಿದ್ದಲ್ಲಿ ಪ್ರೇಮರಸವು ತಾನೇ ಉಕ್ಕುವುದು. ಇದು ವಯಸ್ಸಿನ ಸ್ವಭಾವವು ಯುವಕಯುವತಿಯರು ವಿದ್ಯಾಪಾರಂಗತರಾಗಿದ್ದರೆ ಅವರಿಗೆ ಬುದ್ಧಿ ಹೇಳುವರಾರು? ಇತ್ಯಾದಿ ವಿಷಯಗಳನ್ನು ದೀರ್ಘವಾಗಿ ಯೋಚಿಸಿದರೂ ಯಾವ ವಿಧವಾದ ತೀರ್ಮಾನವನ್ನೂ ಮಾಡಲು ಅವನಿಂದ ಸಾಧ್ಯವಾಗಲಿಲ್ಲ. ಬಿಕನೀರರಸನನ್ನು ಕರೆಸಿ ಅವನಿಗೆ ಮನಃಪೂರ್ವಕವಾಗಿ ತನ್ನ ಪುತ್ರಿಯನ್ನು ಧಾರೆಯೆರೆಯೋಣವೆಂದರೆ ಅದಕ್ಕೂ ಮನಸ್ಸೊಪ್ಪಲಿಲ್ಲ. ರಾಜನೀತಿ ವಿಶಾರದನಾದ ಮಹಾರಾಜನಿಗೆ ಸಮಯೋಚಿತವಾಗಿ ಬುದ್ಧಿಯನ್ನುಪಯೋಗಮಾಡುವುದನ್ನು ಮತ್ತೊಬ್ಬರು ಕಲಿಸಬೇಕೇ? ನೋಡೋಣ! ಸರ್ದಾರ್‌ಸಿಂಹನು ಏನುಮಾಡುವನೆಂಬುದನ್ನರಿತ ನಂತರ ತನ್ನಭಿಪ್ರಾಯವನ್ನು ತಿಳಿಸೋಣವೆಂದು ಸುಮ್ಮನಿದ್ದನು.

ಪ್ರಜೆಗಳು ತನ್ನನ್ನು ದೂರಲವಕಾಶಕೊಡದೆ ಸುಖಲತೆಯನ್ನಪಹರಿಸಿದ ಚೋರನನ್ನು ಹುಡುಕಲು ನಾನಾ ದಿಕ್ಕಿಗೂ ಜನರನ್ನು ಕಳುಹಿಸಿದನು. ಮಂಜುಳೆಯು ಏನಾದರೂ ತಂತ್ರಮಾಡಿ ರಾಜಕುಮಾರಿಯನ್ನು ಯುಕ್ತಿಯಿಂದ ಸಾಗಿಸಿರುವಳೋ, ಏನೋ ಎನ್ನುವುದನ್ನು ತಿಳಿಯುವುದಕ್ಕಾಗಿ ಅವಳನ್ನು ಕರೆದುತರುವಂತೆ ಸೇವಕಿಯೊಬ್ಬಳನ್ನು ಕಳುಹಿಸಿದನು. ಮಂಜುಳೆಯು ಬಹಳ ಗರ್ವದಿಂದ 'ಮಹಾರಾಜನು ಅಂತಃಪುರಕ್ಕೆ ಬಂದು ತನ್ನನ್ನು ಕಾಣಬಹುದು' ಎಂದು ಹೇಳಿಕಳುಹಿಸಿದಳು ಅದರಂತೆಯೇ ಅಮರಸಿಂಹನು ಅಂತಃಪುರಕ್ಕೆ ಹೋಗಲು ತಾನು ಕೂತಕಡೆ ಬಿಟ್ಟೇಳದೆಯೇ ಕುಳಿತುಕೊಳ್ಳುವಂತೆ ದೂರದಲ್ಲಿದ್ದೊಂದಾಸನವನ್ನು ತೋರಿಸಿದಳು. 'ವಿಷವೃಕ್ಷವೇ! ಫಲಕೊಡಲು ಮೊದಲುಮಾಡಿದೆಯಾ?' ಎಂದು ಮನಸ್ಸಿನಲ್ಲಿ ಹೇಳಿಕೊಂಡು ಬಹಿರಂಗವಾಗಿ ಮಾತನಾಡತೊಡಗಿದನು. "ಮಂಜುಳಾ, ನನಗಾದರೆ ವಯಸ್ಸಾಗುತ್ತ ಬಂದಿತು. ಸುಖಲತೆಯ ಗತಿಯನ್ನು ನೀನರಿತೇ ಇರುವೆಯಷ್ಟೆ. ಮುಂದೆಮಾಡಬೇಕಾದುದೇನೆಂಬುದನ್ನು ಹೇಳಿದೆಯಾದರೆ ಅದರಂತೆ ನಡೆಯುತ್ತೇನೆ."

**ಮಂಜುಳೆ**-(ವ್ಯಂಗವಾಗಿ ನಗುತ್ತ) ಈಗ ತಾನೇ ಬುದ್ಧಿ ಬಂತೆಂದು ಕಾಣುತ್ತದೆ. 'ತಲೆತಾಕಿದಮೇಲೆ ಬುದ್ಧಿಬರುವುದು ಸಹಜವೇ! ಅವಳು ಎಂದಾದರೊಂದುದಿನ ಓಡಿಹೋಗುವಳೆಂದು ನಾನು ಮೊದಲೇ ಹೇಳಿರಲಿಲ್ಲವೇ ? ಮುದಿಗೊಡ್ಡಿಗೆ ಯುವತಿಯಮಾತು ರುಚಿಸುವುದುಂಟೇ ? ಈಗಲೂ ಏನೂ ಮುಳುಗಿ ಹೋಗಲಿಲ್ಲ. ಮಾನಸಿಂಹನಿರುವನು ಅವನಿಗೆ ಈ ರಾಜ್ಯಾಭಿಷೇಕವಮಾಡಿಬಿಡಿ, ನಿಮಗೆ ವಯಸ್ಸಾಯಿತು. ಪ್ರಪಂಚವ್ಯಾಪಾರದಲ್ಲಿ ಮುಳುಗಿ ಮುಳುಗಿ ಬೇಸತ್ತಿರುವಿರಿ. ಇನ್ನು ವಿಶ್ರಾಂತಿ ತೆಗೆದುಕೊಳ್ಳಿ, ರಾಜಕಾರ್ಯಗಳನ್ನು ನಾನು ನೋಡಿಕೊಳ್ಳುತ್ತೇನೆ. ಸಕಲರೂ ಅರಿಯುವಂತೆ ನಾಳೆಯ ದಿನವೇ ಮಾನಸಿಂಹನಿಗೆ ಕುಲಾಭಿಷೇಕ ಮಾಡಿ.

**ಅಮರಸಿಂಹ**-(ಶಾಂತದಿಂದ) ಮಂಜುಳಾ, ಒಂದು ವಿಧದಲ್ಲಿ ಯೋಚಿಸಿದರೆ ನಿನ್ನ ಸಲಹೆಯು ಯುಕ್ತವೆಂದೇ ತೋರುವುದು. ಆದರೆ ಸುಖಲತೆಯು ಹಿಂತಿರುಗಿ ಬಂದರೆ ಮಾಡುವುದೇನು ? ಪ್ರಜೆಗಳು ಅವಳನ್ನೇ ರಾಜ್ಯಾಧಿಪತಿಯಾಗಂಗೀಕರಿಸಿದಲ್ಲಿ ಮಾನಸಿಂಹನ ಗತಿಯೇನಾಗಬೇಕು ?

**ಮಂಜುಳೆ**-(ಕೋಪದಿಂದ) ಏನು ಹೇಳಿದಿರಿ ? ಆ ದುರಹಂಕಾರಿಯು ಪುನಃ ಇಲ್ಲಿಗೆ ಬರುವಳೇ ? ಅವಳನ್ನು ಬಹಿಷ್ಕಾರವಮಾಡದೆ ಇಲ್ಲಿ ಸೇರಿಸುವರುಂಟೇ? ಅವಳಿಗೆ ಸಹಾಯ ಮಾಡುವಂಥಾ ಯಾವ ಪ್ರಜೆಯು ನಮ್ಮಾ ರಾಜ್ಯದಲ್ಲಿರುವನು? ದುರಾಚಾರಿಯಾದ ಸ್ತ್ರೀಯು ರಾಜ್ಯಾಧಿಕಾರಕ್ಕರ್ಹಳೇ? ಈ ರಾಜ್ಯದ ಎಲ್ಲೆಯನ್ನು ಅವಳು ಪ್ರವೇಶಿಸಿದ್ದೇ ಆದರೆ ಖಂಡಿತವಾಗಿ ಅವಳ ಶಿರಚ್ಛೇದವಮಾಡುವೆನು ನೀವು ಅವಳಿಗಾಗಿ ಬೇಡಿದರೂ ಕೇಳುವುದಿಲ್ಲ ಸಾಕ್ಷಾತ್ ಪರಮೇಶ್ವರನೇ ಬಂದು ಬೇಡವೆಂದು ಹೇಳಿದರೂ ನಾನು ಕೇಳುವಳಲ್ಲ ಇದು ನಿಶ್ಚಯವು

**ಅಮರಸಿಂಹ**-(ಶಾಂತದಿಂದ) ಮಂಜುಳಾ, ಅದೇಕೆ ಹಸಿದ ಹೆಣ್ಣು ಹುಲಿಯಂತೆ ಈ ರೀತಿ ರೇಗುವೆ? ಶಾಂತದಿಂದ ಮಾತನಾಡು. ಅವಳು ದುರಭಿಪ್ರಾಯದಿಂದ ಓಡಿ ಹೋಗದೆ, ಮತ್ತೊಂದು ದೇಶದ ರಾಜಕುಮಾರನೊಬ್ಬನು ಅವಳಲ್ಲಿ ಮೋಹಗೊಂಡು ಪಟ್ಟಮಹಿಷಿಯನ್ನಾಗಿಮಾಡಿಕೊಳ್ಳುವ ಉದ್ದೇಶದಿಂದ ಕರೆದುಕೊಂಡು ಹೋಗಿದ್ದ ಪಕ್ಷದಲ್ಲಿ ಅವಳಲ್ಲಿ ಹೇಗೆ ಅಪವಾದವನ್ನಾರೋಪಿಸುವೆ? ಇಂತಹ ಸಂದರ್ಭದಲ್ಲಿ ಮಾನಸಿಂಹನಿಗೆ ಪಟ್ಟವು ದೊರಕುವ ಬಗೆ ಹೇಗೆ?

**ಮಂಜುಳೆ**-(ಕೋಪಗೊಂಡ ನಾಗಸರ್ಪದಂತೆ ಬುಸುಗುಟ್ಟುತ್ತ) ವೃದ್ಧರಾಜರೇ, ಮನಬಂದಂತೆ ಹರಟಬೇಡಿ ಇದೆಲ್ಲವೂ ನಿಮ್ಮ ತಂತ್ರವೆನ್ನುವುದನ್ನು ನಾನಾ

ಗಲೇ ಬಲ್ಲೆನು. ಮಗಳ ದುರ್ವಿದ್ಯೆಯನ್ನು ಮುಚ್ಚಿಡಲು ಹುಡುಕುವ ಉಪಾಯವು. ಇನ್ನೀ ವಿಷಯವಾಗಿ ಚರ್ಚಿಸುವುದನ್ನು ಬಿಟ್ಟುಬಿಡಿ. ಈ ರಾಜ್ಯವೆಲ್ಲ ಅರಿಯುವಂತೆ ಅವಳು ಮಾಡಿದ ಕೆಲಸಗಳನ್ನೆಲ್ಲಾ ಡಂಗೋರ ಹೊಡೆಸುವೆನು. ನೀವು ವೃಥಾ ವಾದಿಸಬೇಡಿ. ಯಾರು ತಡೆದರೂ ನಾನು ಮಾಡುವ ಕೆಲಸವನ್ನು ಮಾಡಿಯೇ ತೀರುವೆನು-ಎಂದು ಘರ್ಜಿಸಿದಳು

ರಾಜ ಅಮರಸಿಂಹನಿಗೆ ಇವಳ ಮನೋಽಭಿಪ್ರಾಯವನ್ನರಿಯುವುದು ಕಷ್ಟವಾಗಲಿಲ್ಲ. ಪಾತಕಿಯಾದಿವಳು ಸುಖಲತೆಯ ಸರ್ವನಾಶವಲ್ಲುದ್ಯುಕ್ತಳಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲವೆಂದಂದುಕೊಂಡು ತನ್ನರಮನೆಗೆ ಹೊರಟುಹೋದನು.

ಅರಸನು ಹೊರಟುಹೋದಕೂಡಲೇ ಮಂಜುಳೆಯು ತಾನು ಕುಳಿತಿದ್ದ ಸ್ಥಳದಿಂದೆದ್ದು ಇನ್ನು ಎಲ್ಲವೂ ನಮ್ಮದೇ ಎಂದು ಗರ್ವಿತಳಾಗಿ ಇನ್ನುಮೇಲೆ ರಾಜ್ಯಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನೂ ತಾನೇ ನೋಡಬೇಕೆಂದು ತೀರ್ಮಾನಮಾಡಿಕೊಂಡಳು

ಅಂತಃಪುರವನ್ನು ಬಿಟ್ಟುಹೋದ ವೃದ್ಧರಾಜನು ತನ್ನ ಮುಖ್ಯಾಮಾತ್ಯರನ್ನು ಕರೆಸಿ ಈ ಕೆಳಗೆಕಂಡುಬರುವಂತೆ ಯೋಚಿಸತೊಡಗಿದನು.—'ಅಮಾತ್ಯಶ್ರೇಷ್ಠರಿರಾ, ಅಂತರಂಗ ಆಪ್ತಮಿತ್ರರೇ, ನಡೆದ ಸಂಭವವನ್ನು ನೀವರಿತೇ ಇರುವಿರಿ. ಬಿಕನೀರರಸನ ಸೈನ್ಯವೂ, ನಮ್ಮ ಸೈನ್ಯವೂ ಜಗಳವಾಡಿದ್ದೂ, ಅದರಲ್ಲಿ ನಮಗೆ ಅಪಜಯವುಂಟಾದದ್ದೂ ಸುಖಲತೆಯನ್ನು ಅರಮನೆಯಿಂದ ಕರೆದುತರುವಾಗ ಮಾರುವೇಷದಿಂದ ಬಿಕನೀರರಸನು ಅಪಹರಿಸಿಕೊಂಡು ಹೋದದ್ದೂ ನೀವರಿಯದ ವಿಷಯವಲ್ಲ. ಈಗ ನಾವು ಮಾಡತಕ್ಕ ಕಾರ್ಯವೇನೆಂಬುದನ್ನು ದೀರ್ಘವಾಗಿ ಯೋಚಿಸಿಹೇಳಬೇಕು.'

ಅಷ್ಟಮಂತ್ರಿಗಳೂ ಸ್ವಲ್ಪಹೊತ್ತು ಯೋಚಿಸಿ—''ಮಹಾರಾಜ, ತಮಗೆ! ಪುತ್ರಸಂತಾನವಿಲ್ಲ. ತಮ್ಮ ಪುತ್ರಿಯು ತಪಸ್ಸು ಮಾಡಿ ಜನಿಸಿದವಳು. ಮಹಾಲಕ್ಷ್ಮಿಗೆ ಸಮಾನಳಾದವಳು. ವಿದ್ಯೆಯಲ್ಲಿ ಸರಸ್ವತಿ, ಸಂಗೀತ ವಿಶಾರದಳು, ಮೃದುಭಾಷಣದಲ್ಲಿ ಶಂಕರಿ ಧೈರ್ಯದಲ್ಲಿ ಪರಾಶಕ್ತಿ. ಇತ್ಯಾದಿ ಗುಣಗಳಿಂದಲಂಕೃತಳಾದ ರಾಜಕುಮಾರಿಯನ್ನು ರಾಜಪುತ್ರ ಕುಲತಿಲಕನೂ, ರಾಜಾಧಿರಾಜನೂ, ಧೈರ್ಯಲಕ್ಷ್ಮಿಯುಪಾಸಕನೂ ಆದ ಬಿಕನೀರರಸನು ಅಪಹರಿಸಿರುವನು ಇದು ರಾಜಪುತ್ರ ಕುಲಕ್ಕೆ ಹೊಸದಾದ ಪದ್ಧತಿಯಲ್ಲ. ಉತ್ತಮಸ್ತ್ರೀಯರು ದೊರೆಯದಿದ್ದರೆ ತಂತ್ರಮಾರ್ಗದಿಂದಪಹರಿಸುವುದು ನ್ಯಾಯವೇ ಅಲ್ಲವೇ ? ಶ್ರೀಕೃಷ್ಣ-ರುಕ್ಮಿಣಿ, ಅರ್ಜುನ-ಸುಭದ್ರೆ, ನಳ-ದಮಯಂತಿ ಮೊದಲಾದವರ ಚರಿತ್ರೆಗಳನ್ನು ತಾವು ಓದಿರುವಿರಲ್ಲವೇ? ಆದುದ

ರಿಂದ ಸರ್ದಾರ್‌ಸಿಂಹನಿಗೆ ರಾಜಕುಮಾರಿಯನ್ನಿತ್ತು, ಪಾಣಿಗ್ರಹಣಮಾಡಿ, ರಾಜ್ಯಾಧಿಕಾರವನ್ನು ವಹಿಸಿ, ದೌಹಿತ್ರನಾಗಮನವನ್ನು ನಿರೀಕ್ಷಿಸುತ್ತಾ ಈಶ್ವರಾರಾಧನೆಯಲ್ಲಿ ಕಾಲಕಳೆಯುವುದು ಯುಕ್ತವು. ಈ ವಿವಾಹವು ನಮ್ಮೆಲ್ಲರಿಗೂ ಸರ್ವ ಸಮ್ಮತವಾಗಿಗಿರುವುದು'' ಎಂದರು.

ಪ್ರಧಾನಿಗಳ ವಚನವನ್ನಾಲಿಸಿದ ಅಮರಸಿಂಹನು ಆನಂದಪರವಶನಾಗಿ— 'ಅಷ್ಟಮಿತ್ರರುಗಳೇ, ಸೂರ್ಯನನ್ನು ಕಂಡರಳುವ ಕಮಲಪುಷ್ಪದಂತೆ ನನ್ನ ಹೃತ್ಕಮಲವು ಇಂದು ವಿಕಸಿತವಾಯಿತು ಮಾಡತಕ್ಕ ಕಾರ್ಯಗಳೆಲ್ಲವೂ ನಿಮ್ಮಧೀನವಾಗಿರುವಲ್ಲಿ ನಿಮ್ಮಗಳಭಿಪ್ರಾಯವು ನನಗೆ ಸಮ್ಮತವಾದುದರಿಂದ ಎಲ್ಲ ಕಾರ್ಯಗಳಿಗೂ ಬೇಕಾದ ಏರ್ಪಾಡನ್ನು ನೀವು ಮಾಡುವುದು' ಎಂದನು ಅಷ್ಟಪ್ರಧಾನಿಗಳೂ ಅರಸನಿಗೆ ವಂದಿಸಿ, ತ್ವರಿತವಾಗಿ ಬಿಕನೀರರಸನ ಬಳಿಗೆ ಪ್ರತಿನಿಧಿಗಳನ್ನು ಕಳುಹಿಸಿ ಶುಭಮುಹೂರ್ತದಲ್ಲಿ ರಾಜಕುಮಾರಿಯನ್ನು ಅರಸನಿಗೆ ಧಾರೆಯರೆಯುವುದೆಂದು ಹೇಳಿಕಳುಹಿಸುವುದಾಗಿ ತೀರ್ಮಾನಮಾಡಿಕೊಂಡು, ಅರಸನಿಂದಪ್ಪಣೆ ಪಡೆದು ಪರಮಾಹ್ಲಾದದಿಂದ ವಿವಾಹಕ್ಕೆ ಬೇಕಾದ ಸಲಕರಣೆಗಳನ್ನು ಸಜ್ಜುಗೊಳಿಸಲಾರಂಭಿಸಿದರು

ಕುಮಾರಿಯ ವಿವಾಹವಿಷಯವು ಮಹಾರಾಣಿಯಾದ ಮಂಜುಳೆಯ ಕಿವಿಗೆ ಮುಟ್ಟಿದಕೂಡಲೇ ಅವಳು ರೌದ್ರಾವತಾರವನ್ನುತಾಳಿ ಅಮರಸಿಂಹನನ್ನು ಕರೆದುತರುವಂತೆ ದಾಸಿಯರನ್ನು ಕಳುಹಿಸಿದಳು ತಾನು ಬರುವುದಕ್ಕಾಗುವುದಿಲ್ಲವೆನ್ನುವ ಉತ್ತರವು ಮಹಾರಾಜನಿಂದ ಬಂದಕೂಡಲೇ ಆವೇಶಗೊಂಡವಳಂತೆ ಅರಮನೆಯಲ್ಲಿರುವ ಅರಸಿನ ಮಹಲಿಗೆ ಹೋದಳು. ಅಲ್ಲಿದ್ದ ಅರಸನ ಕಾರ್ಯದರ್ಶಿಯು ಮಹಾರಾಜರನ್ನು ಕಾಣುವ ಸಮಯವು ಅದಲ್ಲವೆಂದು ಹೇಳಿ ತಡೆಯಲು ಮಂಜುಳೆಯು ತಾನಿರುವ ಸ್ಥಿತಿಯನ್ನಾಲೋಚಿಸದೆ, ಬಾಯಿಗೆಬಂದಹಾಗೆ ದೂಷಿಸಲಾರಂಭಿಸಿದಳು ಇವಳ ದೂಷಣೆಯನ್ನೂ, ಬೂಷಣವನ್ನೂ ಕೇಳುವರಾರು? ಯಮಕಿಂಕರಿಯರಂತಿದ್ದಿಬ್ಬರು ಸ್ತ್ರೀಯರು ಮಂಜುಳೆಯನ್ನು ದರದರನೆ ಮತ್ತೊಂದು ಕೊಠಡಿಗೆ ಎಳೆದುಕೊಂಡು ಹೋದರು. 'ಅಹಂಕಾರಕ್ಕೆ ಉದಾಸೀನವೇ ಮದ್ದು'' ಎನ್ನುವ ನಾಣ್ಣುಡಿಯ ಅರ್ಥವು ಮಹಾರಾಣಿಗೆ ಅಂದುತಾನೇ ಪರಿಷ್ಕಾರವಾಗಿ ತಿಳಿಯಿತು



# ಹದಿಮೂರನೆಯ ಅಧ್ಯಾಯವು

## ರಾಜಕುಮಾರನ ಬಾಲ್ಯ ವೃತ್ತಾಂತವು



ಸರ್ದಾರ್‌ಸಿಂಹನ ತಂದೆಯ ಹೆಸರು ಜಯಸಿಂಹನೆಂದು, ಬಾಲ್ಯದಿಂದಲೂ ವೇದಾಂತ ವಿಷಯದಲ್ಲೇ ಈತನ ಮನವು ಲೀನವಾಗಿದ್ದುದರಿಂದ ಸರ್ದಾರ್‌ಸಿಂಹನು ಜನಿಸಿದಕೂಡಲೇ ಪ್ರಪಂಚ ವ್ಯವಹಾರದಲ್ಲಿ ಹೆಚ್ಚು ಸಂಬಂಧಿಸದೆ ಇರುತಿದ್ದನು ಇದಕ್ಕೆ ಬೇರೊಂದು ಪ್ರಬಲವಾದ ಕಾರಣವಿದ್ದಿತು. ಅದೇನಂದರೆ ಸರ್ದಾರ್‌ಸಿಂಹನು ಹುಟ್ಟಿದ್ದು ಮೊದಲು ಸದಾ ಒಂದಲ್ಲ ಒಂದು ವ್ಯಾಧಿಯಿಂದ ಪೀಡಿಸಲ್ಪಡುತ್ತಲೇ ಇದ್ದನು 'ಯುವರಾಜನು ವ್ಯಾಧಿಗ್ರಸ್ತನಾಗಿರುವನು ಮರಣೋನ್ಮುಖನಾಗಿರುವನು ಈಗಲೋ, ಇನ್ನರಘಳಿಗೆಗೋ ಆಯಿತು, ಪೂರೈಸಿತು' ಎನ್ನುವ ವಾಕ್ಯಗಳು ಪದೇಪದೇ ನಗರ ಜನರಿಂದಾಡಲ್ಪಡುತ್ತಿದ್ದವು 'ಸರಿ, ಈಗೇನೂ ಇಲ್ಲ ಸ್ವಸ್ಥವಾಗಿರುವನು' ಎಂದಾನಂದಪಡುವಷ್ಟರಲ್ಲಿಯೇ ಮತ್ತೊಂದು ಬಗೆಯಾದವ್ಯಾಧಿಯು ಅರಸುಕುಮಾರನನ್ನು ಬಂದು ಆವರಿಸುವುದು ತನಗಿದ್ದ ಒಬ್ಬ ಮಗನೂ ಈರೀತಿ ಸದಾ ರೋಗಪೀಡಿತನಾಗಿರುವುದನ್ನು ನೋಡಿನೋಡಿ ಬೇಸತ್ತ ಮಹಾರಾಜನು ವಿರಕ್ತನಾಗಿ ಸದಾ ತತ್ವವಿಚಾರದಲ್ಲಿಯೇ ತನ್ನ ಕಾಲವನ್ನು ಕಳೆಯತೊಡಗಿದನು. ಮಹಾರಾಣಿಯು ಪತಿವಚನವನ್ನುಲ್ಲಂಘಿಸದ ಮಹಾ ಪತಿವ್ರತೆಯು ಮಕ್ಕಳಾಗುವುದು ದುಃಖಹೇತುವೆಂದೂ, ಸಂಸಾರಚಕ್ರವು ಮಹಾ ಕೆಟ್ಟದ್ದೆಂದೂ, ಬಂಧನಿವೃತ್ತಿ ಮಾರ್ಗವನ್ನು ಹುಡುಕಬೇಕೆಂದೂ ಬೋಧಿಸುವನು. ಬಾಲಕನು ದ್ವಾದಶ ವರ್ಷದವನಾದಕೂಡಲೇ ಅವನ ಪೋಷಣೆಯ ಭಾರವನ್ನು ತನ್ನ ಮಂತ್ರಿಯಾದ ರಘುನಾಥಸಿಂಹನಿಗೊಪ್ಪಿಸಿ, ಪತ್ನೀಸಮೇತನಾಗಿ ಸಮೀಪದಲ್ಲಿದ್ದುದೊಂದು ಅರಣ್ಯವನ್ನು ಪ್ರವೇಶಿಸಿ, ಅಲ್ಲೊಂದು ಚಿಕ್ಕಮನೆಮಾಡಿಕೊಂಡು, ಸದ್ಗ್ರಂಥ ಪಠನದಲ್ಲಿ ಕಾಲಕಳೆಯಲಾರಂಭಿಸಿದನು. ತತ್ವದ ಅಂತರಂಗ ಮರ್ಮವನ್ನು ಪೂರ್ಣವಾಗರಿತ ಮಹಾರಾಜನು ತಾನಿದ್ದ ಗೃಹಮಧ್ಯದಲ್ಲಿ ನಾನಾವಿಧವಾದ ವನಮೂಲಿಕೆಗಳನ್ನು ಶೇಖರಿಸಿ, ಒಂದು ಕೊರಡಿಯನ್ನು ನಿರ್ಮಿಸಿದ್ದನು. ಸತಿಪತಿಯರೀರ್ವರೂ ಈ ಏಕಾಂತಗೃಹದಲ್ಲಿ ಪರಮೇಶ್ವರ ಧ್ಯಾನಮಾಡುತ್ತಾ ಕುಮಾರನು ಹದಿನೆಂಟು ವರ್ಷದವನಾದಾಗ ಪರಲೋಕಗತರಾದರು ರಘುನಾಥಸಿಂಹನೇ ರಾಜಕುಮಾರನ ರಕ್ಷಣೆಯ ಭಾರವನ್ನು ವಹಿಸಬೇಕಾಗಿ ಬಂದಿತು. ರಾಜಕುಮಾರನೂ, ಮಂತ್ರಿಕುಮಾರನಾದ ಪ್ರತಾಪ

ಸಿಂಹನೂ ಸಮವಯಸ್ಸಿನವರಾಗಿದ್ದುದರಿಂದ ಇಬ್ಬರೂ ದೇಹವು ಮಾತ್ರ ಬೇರೆ, ಪ್ರಾಣವೊಂದು ಎಂಬಂತೆ ಬಹಳ ಅನ್ಯೋನ್ಯವಾಗಿರುತ್ತಿದ್ದರು. ರಾಜಕುಮಾರನು ಪ್ರಾಪ್ತವಯಸ್ಕನಾದಕೂಡಲೇ ರಾಜ್ಯಪಾಲನೆಯ ಭಾರವನ್ನು ವಹಿಸಬೇಕಾಗಿ ಬಂದಿತು. ವೃದ್ಧಮಂತ್ರಿಯ ಸಲಹೆಯಂತೆ ಪ್ರಜಾರಂಜನೆಮಾಡುತ್ತ ವಿಚಕ್ಷಣೆಯಿಂದ ರಾಜ್ಯಪಾಲನೆ ಮಾಡುತ್ತಿದ್ದನು

ಸುಖಲತೆಯು ಅರಮನೆಗೆ ಬಂದಿರುವ ವೃತ್ತಾಂತವು ರಘುನಾಥಸಿಂಹನಿಗೆ ತಿಳಿಯದು. ಅವಳನ್ನು ನಗರಕ್ಕೆ ಕರದುತರದೆ ತನ್ನ ತಂದೆಯು ವಾಸಮಾಡುತಿದ್ದ ವನ ಮೂಲಿಕೆಗಳಿಂದ ನಿರ್ಮಿಸಲ್ಪಟ್ಟಿದ್ದ ಕೊರಡಿಯಲ್ಲಿ ಮಲಗಿಸಿದ್ದನು. ಶುಕ್ರವಾರ ಬೆಳಗ್ಗೆ ರಾಜಕುಮಾರನಿಂದ ಕರೆದುತರಲ್ಪಟ್ಟ ರಮಣಿಯು ಮಂಗಳವಾರಸಾಯಂಕಾಲದವರೆಗೂ ಕಣ್ಣು ಬಿಡಲೇ ಇಲ್ಲ. ನ್ಯೊಮೋಲೆಚ್ಚರವಿಲ್ಲದೆ ಮಲಗಿರುವ ರಾಜಕುಮಾರಿಯನ್ನು ನೋಡಿ ನೋಡಿ ರಾಜಕುಮಾರನು ನಿಟ್ಟುಸಿರುಬಿಡುತ್ತಿದ್ದನು. ಈ ಈ ವಿಷಯವನ್ನು ಅಮಾತ್ಯಶ್ರೇಷ್ಠನಾದ ರಘುನಾಥಸಿಂಹನಿಗೆ ತಿಳಿಸಿದರೆ, ಯಾವ ವಿಧವಾದ ಅಭಿಪ್ರಾಯವನ್ನು ಹೊಂದುವನೋ? ಅವಳನ್ನು ಮರ್ಯಾದೆಯಿಂದ ರಾಜಾ ಅಮರಸಿಂಹನ ಬಳಿ ಕಳುಹಿಸೆಂದರೆ ಆಗ ಮಾಡುವುದೇನು? ರಾಜನೀತಿ ವಿಶಾರದನಾದ ಮಂತ್ರಿಯ ವಚನವನ್ನುಲ್ಲಂಘಿಸಲಾರಿಂದ ಸಾಧ್ಯ? ಈಗಲೋ, ಇನ್ನರಗಳಿಗೆಗೋ ಮರಣಹೊಂದುವಂತಿದ್ದ ರಾಜಕುಮಾರಿಯನ್ನಗಲಲು ರಾಜಕುಮಾರನ ಮನಸ್ಸು ಒಪ್ಪಲಿಲ್ಲ. ರಾಜಕುಮಾರಿಯು ಜೀವಿಸುವಳೆನ್ನುವ ನಂಬುಗೆಯು ಹೋಯಿತು. ಪದ್ಮಲತೆಯ ಶಾಂತವಚನಗಳಿಂದ ಸ್ವಲ್ಪಹೊತ್ತು ಧೈರ್ಯಹೊಂದಿದರೂ ಪುನಃ ಚಿಂತೆಗೀಡಾಗುವನು ರಾಜಕಾರ್ಯಗಳು ಪೂರೈಸಿದನಂತರ ಪ್ರತಾಪಸಿಂಹನು ಸರ್ದಾರ್ ಸಿಂಹನಿರುವ ಅರಮನೆಗೆ ಬರುವನು. ವಿಶೇಷ ವರ್ತಮಾನಗಳಿದ್ದರೆ ಅವರಿಬ್ಬರೂ ಕಲೆತು ಮಾತನಾಡುತ್ತಿದ್ದರು ರಾಜಕುಮಾರಿಯನ್ನು ಕರದುತಂದಿರುವ ವಿಷಯವು ಕೆಲವುದಿನಗಳ ವರೆಗೆ ರಘುನಾಥಸಿಂಹನಿಗೆ ತಿಳಿಯದಿರುವುದೇ ಉತ್ತಮವೆಂದು ಇಬ್ಬರೂ ತೀರ್ಮಾನಿಸಿದರಾದರೂ ಮತ್ತಾರಾದರೂ ಬಹಿರಂಗಪಡಿಸಿದರೆ ಮಾಡುವುದೇನೆಂಬ ಭಯವುಮಾತ್ರ ಪೀಡಿಸುತ್ತಲೇ ಇದ್ದಿತು. ಸೈನಿಕರಿಗೆ ರಾಜಕುಮಾರಿಯ ವಿಷಯಗಳೊಂದೂ ತಿಳಿಯದು. ರಾಜಪುತ್ರರಿಗೆ ಇಂತಹ ಕಲಹಗಳು ನಿತ್ಯನೈಮಿತ್ತಿಕವಾದುದರಿಂದ ಯಾರೋ ದಾರಿಹೋಕರ ಜಗಳವೆಂದು ಸುಮ್ಮನಿದ್ದುಬಿಟ್ಟರು. ಸರ್ದಾರ್‌ಸಿಂಹ, ಪ್ರತಾಪಸಿಂಹ, ಪದ್ಮಲತೆ ಈ ಮೂವರೂ ಬಹಿರಂಗಪಡಿಸುವರಲ್ಲ. ಮಾನಸಿಂಹನು ಮೂಢಶಿಖಾಮಣಿಯಾದುದರಿಂದ ಅವನು ನಿಜಸ್ಥಿತಿಯನ್ನು ಹೇಳಿದ

ರೂ ಕೂಡ ಕೇಳುವರು ನಂಬುವಂತಿಲ್ಲ. ರಾಜಾ ಅಮರಸಿಂಹನಿಗಿರತಕ್ಕ ಕೋಪದಲ್ಲಿ ಮಗಳ ಸ್ಮರಣೆಯನ್ನು ಕೂಡ ಮಾಡನು ಇವುಗಳನ್ನೆಲ್ಲಾ ದೀರ್ಘವಾಗಿ ಆಲೋಚಿಸಿ ರಾಜ ಮಂತ್ರಿಗಳಿಬ್ಬರೂ ಸ್ವಲ್ಪಮಟ್ಟಿಗೆ ಸಮಾಧಾನ ತಂದುಕೊಂಡರು

ಎಂದಿನಂತೆ ಮಂತ್ರಿಸುತನಾದ ಪ್ರತಾಪಸಿಂಹನು ರಾಜಕುಮಾರನ ಸಂದರ್ಶನಕ್ಕಾಗಿ ಬಂದಾಗ ಆತನ ಮುಖವು ಎಂದಿನಂತಿಲ್ಲದಿರುವುದನ್ನು ಕಂಡ ಸರ್ದಾರ್ ಸಿಂಹನು ಅವನನ್ನು ಕುರಿತು ಅದರ ಕಾರಣವನ್ನು ಕೇಳುವನು. –'ಮಿತ್ರಾ, ರಾಜಾ ಅಮರಸಿಂಹನ ಮಂತ್ರಿಗಳು ನಿನ್ನನ್ನು ಕಾಣಲು ಬಂದಿರುವರು ರಾಜಕುಮಾರಿಯ ವಿಷಯವಾಗಿ ನಿನ್ನೊಡನೆ ಮಾತನಾಡಬೇಕಂತೆ ನಾನವರನ್ನು ತಕ್ಕ ಮರ್‍ಯಾದೆಯಿಂದುಪಚರಿಸಿ, ಬಿಡಾರ, ಸೇವಕರು ಮೊದಲಾದನುಕೂಲಗಳನ್ನು ಸಿದ್ಧಮಾಡಿಕೊಟ್ಟು ಈ ವರ್ತಮಾನವನ್ನು ತಿಳಿಸಿ ಹೋಗೋಣವೆಂದು ಬಂದೆನು' ಎಂದನು.

**ಸರ್ದಾರ್ ಸಿಂಹ**--ಮಿತ್ರಾ, ರಾಜಕುಮಾರಿಯ ವಿಷಯವಾಗೇನು ಮಾತನಾಡಬೇಕಂತೆ? ನನ್ನ ಮನಸ್ಸು ಈಗ ಸರಿಯಾದ ಸ್ಥಿತಿಯಲ್ಲಿಲ್ಲವಾದುದರಿಂದ ನೀನೇ ನಾನೆಂದು ಭಾವಿಸಿ, ಸಮಯೋಚಿತವಾಗಿ ಮಾತನಾಡಿ ಅವರನ್ನು ಮರ್‍ಯಾದೆಯಿಂದ ಕಳುಹಿಸಿಕೊಡು.

**ಪ್ರತಾಪಸಿಂಹ**- ಮಹಾರಾಜ, ನಿನ್ನಿಷ್ಟಪ್ರಕಾರವೇ ಆಗಲಿ. ಆದರೆ ಅಮರಸಿಂಹನ ಮಂತ್ರಿಗಳೊಡನೆ ನಾನು ಮಾತನಾಡುವಾಗ ನೀನು ಸಮೀಪದಲ್ಲಿರಬೇಕು. ಇಲ್ಲದಿದ್ದರ ಅವರು ನಂಬಲಾರರು ಅಮರಸಿಂಹನ ಮಂತ್ರಿಗಳಾದರೋ ಅತಿ ಮೇಧಾವಿಗಳಾಗಿರುವರು. ನಮ್ಮ ತಂದೆಗೆ ಈ ವಿಷಯಗಳೊಂದೂ ತಿಳಿಯದ್ದರಿಂದ ಅವರು ಆತನನ್ನು ಕಾಣುವ ಮೊದಲು ನಾವವರನ್ನು ನಮ್ಮ ವಶಪಡಿಸಿಕೊಂಡರೆ ಉತ್ತಮ.

**ಸರ್ದಾರ್ ಸಿಂಹ**-(ಸ್ವಲ್ಪ ಹೊತ್ತು ಯೋಚಿಸಿ) ಆಪ್ತಮಿತ್ರಾ, ಪ್ರಜೆಗಳು ನನ್ನ ವಿಷಯದಲ್ಲಿ ಎಂತಹ ಅಭಿಪ್ರಾಯಗೊಳ್ಳುವರೋ! ನಿನ್ನ ಜನಕನು ನನ್ನನ್ನು ನಿಂದಿಸಿದರೆ ನಾನೇನು ಮಾಡಲಿ? ಅಮರಸಿಂಹನೂ, ಆತನ ಮಂತ್ರಿಗಳೂ ನನ್ನಲ್ಲಿ ದೋಷವನ್ನಾರೋಪಿಸಿದರೆ ಆ ಅವಮಾನವನ್ನು ನಾನು ಹೇಗೆ ಸಹಿಸಲಿ? ಸುಖಲತೆಯಾದರೋ ಜ್ಞಾನಶೂನ್ಯಳಾಗಿರುವಳು. ಅವಳು ಸೌಖ್ಯವಾಗಿದ್ದಪಕ್ಷದಲ್ಲಿ ಈ ರೀತಿಯಾದ ಚಿಂತೆಗೆ ಅವಕಾಶವೇ ಇರುತ್ತಿರಲಿಲ್ಲ. ಇವುಗಳನ್ನೆಲ್ಲಾ ಯೋಚಿಸತೊಡಗಿದರೆ ನನ್ನ ಹೃದಯವು ಕಂಪಿಸುವುದು ಒಳ್ಳೆಯದು. ನಾನೂ ನಿನ್ನೊಡನೆ ಬರು

ತ್ತೇನೆ, ಪದ್ಮಲತೆಯೂ, ರಾಜಕುಮಾರಿಯೂ ಇಲ್ಲೇ ಇರಲಿ. ಮೊದಲು ಅವರಿಂದಲೇ ಎಲ್ಲ ವಿಷಯುಗಳನ್ನೂ ಗ್ರಹಿಸಿಕೊಂಡು ಅನಂತರ ನಮ್ಮ ವೃತ್ತಾಂತವನ್ನು ತಿಳಿಸೋಣ-ಎಂದು ಹೇಳಿ ಪದ್ಮಲತೆಯ ಕಡೆ ತಿರುಗಿ–'ಪದ್ಮಲತಾ, ರಾಜಾಅಮರಸಿಂಹನ ಅಮಾತ್ಯರು ಬಂದಿರುವರಂತೆ, ಅವರು ಯುಕ್ತಿವಂತರಾದುದರಿಂದ ಅವರನ್ನು ನಂಬಲೇ ಬಾರದು. ನಾನೀಗ ಅವರನ್ನು ನೋಡದಿದ್ದರ ಸಂಶಯುಗೊಳ್ಳುವರಾದ್ದರಿಂದ ಅವರನ್ನು ಕಾಣಲು ಹೋಗಿಬರುವೆನು ನಾನು ಬರುವವರೆಗೂ ನೀನು ಧೈರ್ಯವಾಗಿರುವೆಯಾ? ಜಾಗ್ರತೆ ಬರುತ್ತೇನೆ'ಎನಲು-ಮಹಾರಾಜ, ತಾವು ಹೋಗಿಬನ್ನಿ, ಅಧೈರ್ಯಪಡಬೇಡಿ ರಾಜಕುಮಾರಿಗೆ ಯಾವ ವಿಪತ್ತೂ ಉಂಟಾಗದು. ಅಮರಸಿಂಹನ ಮಂತ್ರಿಗಳು ನಿಮ್ಮಲ್ಲಿ ದೋಷವನ್ನಾರೋಪಿಸಿದಲ್ಲಿ ನೀವು ನಿರ್ಭಯವಾಗಿ ಆತನ ಕುಟುಂಬ ರಹಸ್ಯವನ್ನೆಲ್ಲ ಅವರೆದುರಿಗೆ ವಿವರವಾಗಿ ಬಹಿರಂಗಪಡಿಸಿ, ಸುಖಲತೆಯ ಮನೋಭೀಷ್ಟದಂತೆಯೇ ಪ್ರತಿಯೊಂದು ಕಾರ್ಯವೂ ನಡೆದಿರುವುದೆಂದು ಹೇಳಿ. ನೀವು ವಿಜಯಮಾಲೆಯೊಡನೆ ತಿರುಗಿ ಬರುವುದನ್ನು ನಿರೀಕ್ಷಿಸುತ್ತೇನೆ' ಎಂದಳು.

ಸರ್ದಾರ್‌ಸಿಂಹನು ಕೃಪಾದೃಷ್ಟಿಯಿಂದ ಸುಖಲತೆಯ ಕಡೆ ತಿರುಗಿ-'ಸ್ತ್ರೀರತ್ನವೇ, ನಾನು ಪುನಃ ಬರುವುದರೊಳಗಾದರೂ ನಿನಗೆ ಜ್ಞಾನಬರುವಂತೆ ಭಗವಂತನು ಕರುಣಿಸಲೆಂದು ಬಯಸುತ್ತೇನೆ ನನಗಪಮಾನವನ್ನುಂಟುಮಾಡಬೇಡ' ಎಂದು ಹೇಳಿ ಖಿನ್ನನಾಗಿ ಪ್ರತಾಪಸಿಂಹನೊಡನೆ ಹೊರಟು ಹೋದನು

ರಾಜಮಂತ್ರಿಯರಿಬ್ಬರೂ ಹೊರಟುಹೋಗಲು ಪದ್ಮಲತೆಯು ಬಾಗಿಲನ್ನು ಬಂಧಿಸಿ, ಸುಖಲತೆಯ ಸಮೀಪದಲ್ಲಿ ಕುಳಿತುಕೊಂಡು 'ಅಹಾ! ನನ್ನ ಜನ್ಮವೃತ್ತಾಂತವನ್ನು ಯೋಚಿಸಿದರ ನನಗೇ ನಗುಬರುವುದು. ನನ್ನ ಮಾತಾಪಿತೃಗಳಾರೋ, ಅದೇ ಗೊತ್ತಿಲ್ಲ. ಹುಟ್ಟಿದ್ದೆಲ್ಲೋ, ಬೆಳೆದದ್ದೆಲ್ಲೋ ಇವುಗಳನ್ನರಿಯದೆ ನನ್ನಷ್ಟಕ್ಕೆ ನಾನೇ ಚಿಂತಿಸಿ ಚಿಂತಿಸಿ, ಗೋಳಾಡುತ್ತಿದ್ದೇನೆ ಸುಖಲತೆಯ ಗೆಳೆತನದಿಂದೆಲ್ಲವನ್ನೂ ಮರೆತು ಆನಂದದಿಂದಿದ್ದೆನು. ಅವಳು ಜ್ಞಾನಶೂನ್ಯಳಾಗಿ ಮಲಗಿದ ಕೂಡಲೇ ದುಃಖವು ನನ್ನನ್ನಾವರಿಸಿತು ಧೈರ್ಯವಂತಳಾದ ನಾನು ಹಸುಮಗುವಿನಂತೆ ಅಳುತ್ತಿರುವೆನು. ಈಶ್ವರಾ, ನಾನಿದಕ್ಕೇನುಮಾಡಲಿ''—ಎಂದು ಚಿಂತಿಸುತ್ತಾ ಕೈಯನ್ನು ನೆಲದಮೇಲೆ ತಟ್ಟಿದಳು. ಅವಳು ಹಾಗೆ ತಟ್ಟಿದಕೂಡಲೇ ಅಲ್ಲಿದ್ದ ಹಲಗೆಯೊಂದು ಮುರಿದು ಕೆಳಗೆ ಬಿದ್ದಿತು. ಅಲ್ಲೊಂದು ಕೊರಡಿಯಿರುವುದೆಂದರಿತ ಪದ್ಮಲತೆಯು ಭ್ರಾಂತಳಾಗಿ ನೋಡುತ್ತಿರುವಾಗ ಯಾರೋ ಮೇಲೆ ಬರುವಂತಾಗಲ

ರಮಣಿಯು ಬೆದರಿ 'ಅಯ್ಯೋ! ಇದೇನು ಭೂತವೋ, ಪಿಶಾಚಿಯೋ, ರಾಕ್ಷಸಿಯೋ ಒಂದೂ ಅರಿಯೆನಲ್ಲ!' ಎಂದು ಭಯದಿಂದ ಕೂಗುತ್ತಾ ಸಮೀಪದಲ್ಲಿದ್ದ ಹಲಗೆಯನ್ನು ತೆಗೆದು ಮುರಿದುಹೋದಕಡೆ ಮುಚ್ಚಲುದ್ಯುಕ್ತಳಾಗುವಷ್ಟರಲ್ಲಿಯೇ ಒಂದು ಮಾನವಾಕೃತಿಯು ಪದ್ಮಲತೆಯ ಸಮೀಪಕ್ಕೆ ಬಂದುದನ್ನು ಕಂಡ ರಮಣಿಯು ಭೀತಿಯಿಂದ ಮೂರ್ಛೆಹೊಂದಿದಳು.



## ೧೪ನೆಯ ಅಧ್ಯಾಯವು.

### ಮನೋವ್ಯಾಕುಲ.

ಮಿತ್ರ, ರಾಜಾ ಅಮರಸಿಂಹನ ಮಂತ್ರಿಗಳು ನಮಗನುಕೂಲವಾಗಿಯೇ ತೀರ್ಮಾನಮಾಡಿರುವರು. ಅಮರಸಿಂಹನು ರಾಜನೀತಿ ವಿಶಾರದನಾದುದರಿಂದ ಸುಖಲತೆಯ ಅಪರಾಧವನ್ನು ಮನ್ನಿಸಿ, ಅವಳ ಭವಿಷ್ಯತ್ಸುಖವನ್ನುದ್ದೇಶಿಸಿ, ಮಂತ್ರಿಗಳನ್ನಿಲ್ಲಿಗೆ ಕಳುಹಿಸಿರುವನು ನಮ್ಮಿಷ್ಟದಂತೆಯೇ ಭಗವಂತನ ಅನುಗ್ರಹವೂ ದೊರಕಿತು ಸುಖಲತೆಯು ಗುಣಹೊಂದಿದ್ದರೆ ನಾವೇ ಪುಣ್ಯಶಾಲಿಗಳೆನಿಸಿಕೊಳ್ಳುವುದರಲ್ಲಿ ಸಂಶಯವೇನು ? ರಾಜ್ಯದ ಪ್ರಜೆಗಳನ್ನು ಒಂದುಗೂಡಿಸಿ ವಿವಾಹ ವಿಷಯವನ್ನವರಿಗೆ ತಿಳಿಸಿ, ಅವರ ಸಮ್ಮತಿಯನ್ನರಿತನಂತರ ತೀರ್ಮಾನವನ್ನು ಹೇಳುವುದಾಗಿ ಹೇಳಿಬಂದಿರುವೆವು ಆದುದರಿಂದ ನಾವಿಲ್ಲಿರತಕ್ಕ ಅವಶ್ಯಕವಿಲ್ಲ. ಬಾ, ಹೋಗೋಣ, ಪದ್ಮಲತೆಯು ಇನ್ನೂ ಬಾಲೆಯಾದುದರಿಂದ ಒಂಟಿಯಾಗಿರಲು ಹೆದರುವಳು-ಎಂದು ಸರ್ದಾರ್‌ಸಿಂಹನು ಹೇಳಿದನು.

ಅದಕ್ಕೆ ಪ್ರತಾಪಸಿಂಹನು-'ಮಹಾರಾಜ, ಹಾಗೆಯೇ ಆಗಲಿ. ಪದ್ಮಲತೆಯಲ್ಲಿ ನಿನಗೆ ಅಭಿಮಾನವು ಹೆಚ್ಚಾಗಿರುವುದರಿಂದ ಅವಳು ಹೆದರುವಳೆಂದು ಹೇಳುವೆ. ಅವಳು ಮಹಾ ಧೈರ್ಯವಂತಳು ಅವಳ ವೀರಶೌರ್ಯದಿಂದಲ್ಲವೇ ಸುಖಲತೆಯು ಜೀವಿಸಿರುವಳು. ಅವಳ ಚಿಕ್ಕಮ್ಮನಾದ ಮಹಾರಾಣಿಯು ಹೆಣವು ಸಾಗದಿರುವುದೂ ಇವಳ ಸಾಮರ್ಥ್ಯದಿಂದಲೇ ಎಂದು ಮಂತ್ರಿಗಳು ಹೇಳಲಿಲ್ಲವೇ" ಎನಲು, ರಾಜಕುಮಾರನು ಅದಕ್ಕುತ್ತರವಾಗಿ-'ಪ್ರತಾಪಸಿಂಹ, ಪದ್ಮಲತೆಯು ಕಪಟರಹಿತಳು. ಅವಳ ಮುಖದಲ್ಲಿ ರಾಜಲಕ್ಷ್ಮೀ ಕಳೆಯು ಪ್ರಕಾಶಿಸುತ್ತಿರುವುದು. ಇಷ್ಟು ದಿನ ಒಂದು ವಿಷಯವನ್ನು ನಿನಗೆ ಹೇಳದೆ ಮರೆಮಾಚಿದ್ದೆನು. ಅದನ್ನು ಈಹೊತ್ತು ಹೇಳುತ್ತೇನೆ. ಆದರೆ

ಅವಳ ಕುಲಗೋತ್ರಗಳನ್ನು ಸರಿಯಾಗಿ ತಿಳಿದುಕೊಳ್ಳದೆ ಆ ವಿಷಯವಾಗಿ ಮಾತನಾಡುವುದರಲ್ಲಿ ಪ್ರಯೋಜನವಿಲ್ಲ.'' ಎಂದು ನಿಟ್ಟುಸಿರುಬಿಡಲು ಪ್ರತಾಪಸಿಂಹನು 'ಮಹಾರಾಜ, ನೀನು ಮರೆಮಾಚಿದ ವಿಷಯವನ್ನು ನಾನು ಹೇಳಿಬಿಡುತ್ತೇನೆ ಪದ್ಮಲತೆಯನ್ನು ವರಿಸುವಂತೆ ನನಗೆ ಹೇಳಬೇಕೆಂದಿದ್ದೆ ನನ್ನ ಜ್ಯೋತಿಷ್ಯವು ಸರಿಯೋ ಅಲ್ಲವೋ' ಎಂದನು.

ಮಹಾರಾಜನು ಆಶ್ಚರ್ಯದಿಂದ–'ಪ್ರತಾಪಸಿಂಹ, ನೀನು ನಿಜವಾದ ಜ್ಯೋತಿಷಿಯೇ ಹೌದು, ನಿನ್ನ ಮಾತು ನಿಶ್ಚಯವು ನಾನು ಯುಕ್ತಿಯಿಂದವಳ ಕುಲಗೋತ್ರವನ್ನರಿಯುವೆನು. ನಿನ್ನ ಜನಕನ ಬಳಿ ಬಂದಿರುವ ಮಂತ್ರಿಗಳ ಮೂಲಕ ಅವಳ ಗುಣ ವಿಶೇಷಗಳನ್ನು ನಿನ್ನ ತಂದೆಯರಿಯುವಂತೆ ಮಾಡಿ, ವಿವಾಹಕ್ಕೆ ಏರ್ಪಾಡು ಮಾಡುವೆನು ಎಂದನು ಮೇಲೆ ಹೇಳಿದ ರೀತಿಯಲ್ಲಿ ಸಂಭಾಷಣೆಗೈಯುತ್ತಾ ರಾಜನೂ ಮಂತ್ರಿಯೂ ರಾಜಗೃಹವನ್ನು ಪ್ರವೇಶಿಸಹೋಗಲು ಅರಮನೆಯ ಬಾಗಿಲು ಹಾಕಿದ್ದಿತು ಬಾಗಿಲನ್ನು ತಟ್ಟಿದರೂ ಉತ್ತರವಿಲ್ಲ ಹೆಸರು ಹಿಡಿದು ಕೂಗಿನೋಡಿದರು ಜವಾಬಿಲ್ಲ ಏನು ಮಾಡಿಯೂ ಪ್ರಯೋಜನವಿಲ್ಲವಾಯಿತು. ಇಬ್ಬರೂ ಸಾಹಸದಿಂದ ಬೀದಿಯ ಕಡೆಯಿಂದ ಹೋಗಿ ಮಹಡಿಯನ್ನು ಹತ್ತಿ ಒಳಕ್ಕಿಳಿದು ಸುಖಲತೆಯು ಮಲಗಿದ್ದ ಕೊಠಡಿಯನ್ನು ಹೊಕ್ಕು ನೋಡಲು ಅವಳಿಲ್ಲ. ಪದ್ಮಲತೆಯು ಮಾತ್ರ ಸ್ಮರಣೆಯಿಲ್ಲದೆ ಬಿದ್ದಿದ್ದಳು. ಕೈ ಕಾಲುಗಳೆಲ್ಲವೂ ಹಾಕಿದ್ದು ಹಾಕಿದಹಾಗೆಯೇ ಬಿದ್ದಿದ್ದವು ಯಾರೋ ಜ್ಞಾನವನ್ನು ಹೋಗಲಾಡಿಸುವ ಔಷಧವನ್ನು ಪ್ರಯೋಗಿಸಿರುವಂತೆ ಕಂಡುಬಂದಿತು. 'ಪದ್ಮಲತಾ, ಪದ್ಮಲತಾ' ಎಂದಿಬ್ಬರೂ ಸಾವಿರಸಲ ಕೂಗಿನೋಡಿದರು ನಿಷ್ಪ್ರಯೋಜನವಾಯಿತು ಜ್ಞಾನ ಬರುವ ಪ್ರಯತ್ನಗಳನ್ನು ಮಾಡಿದರು ಪ್ರತಾಪಸಿಂಹನು ಆ ಅರಮನೆಯಲ್ಲೆಲ್ಲಾ ಸುಖಲತೆಯನ್ನು ಹುಡುಕಿಯೂ ಕಾಣದೆ ದುಃಖಿಸಿ, ಅವಳು ಯಾವ ಮಾರ್ಗದಿಂದ ಹೊರಟುಹೋಗಿರಬೇಕೆಂಬುದನ್ನು ಯೋಚಿಸತೊಡಗಿದನು.

ಬಹಳ ಹೊತ್ತಾದನಂತರ ಪದ್ಮಲತೆಯು ಕಣ್ಬಿಡಲಾರಂಭಿಸಿದಳು ಪುನಃ ಕಣ್ಣುಗಳನ್ನು ಮುಚ್ಚಿದಳು ಸರ್ದಾರ್‌ಸಿಂಹನು ಬೀಸಣಿಗೆಯಿಂದ ಬೀಸತೊಡಗಿದನು. ಮತ್ತೊಂದು ಸಲ ಕಣ್ತೆರೆದು ನೋಡಿದಳು. ಕೈ ಕಾಲು ಅಲ್ಲಾಡಿದವು. ಮೆಲ್ಲಗೆ ಬಾಯ್ತೆರೆದು ನೀರು ಬೇಕೆಂದು ಕೈ ಸಂಜ್ಞೆಮಾಡಲು ಪ್ರತಾಪಸಿಂಹನು ಒಂದು ಪಾತ್ರೆಯಲ್ಲಿ ಸ್ವಲ್ಪ ನೀರು ತಂದುಕೊಟ್ಟನು. ಅದನ್ನು ಕುಡಿದು ಆಳ

ತೊಡಗಿದಳು. ಸರ್ದಾರ್‌ಸಿಂಹನು ಅವಳು ಅಳುವ ಕಾರಣವನ್ನು ಕೇಳಲು ಹೀನಸ್ವರ ದಿಂದ—'ಮಹಾರಾಜ, ರಾಜಕುಮಾರಿಯು ಪರಿತಾಪಸ್ಥಿತಿಯುನ್ನು ಕಂಡು ಮನ ಕರಗಿ ನನ್ನಷ್ಟಕ್ಕೆ ನಾನೇ ಚಿಂತಿಸುತ್ತಾ ಕೈಯಿಂದ ನೆಲವನ್ನು ತಟ್ಟಲು ಒಂದು ಹಲಗೆಯು ಮುರಿದಂತೆ ಶಬ್ದವಾಗಲು ಭೀತಿಯಿಂದಾಕಡೆ ನೋಡಿದೆನು. ಯಾರೋ ಒಬ್ಬ ಪುರುಷನು ಮೇಲೆ ಹತ್ತಿಬರಲು ಪ್ರಯತ್ನಪಡುವಂತೆ ತೋರಲು ಭಯವನ್ನು ಬಿಟ್ಟು ಧೈರ್ಯ ದಿಂದ ಆ ಮುರಿದ ಹಲಗೆಯನ್ನೇ ಆ ಸ್ಥಳಕ್ಕೆ ಪುನಃ ಮುಚ್ಚುವುದಕ್ಕೆ ಹೋಗಿ ಇದ್ದಕ್ಕಿದ್ದಹಾಗೆ ಕೈಕಾಲುಗಳು ನಡುಗಿ ಮೂರ್ಛೆ ಹೊಂದಿದೆನು. ಆಮೇಲೆ ಏನಾಯಿತೋ ನಾನರಿಯೆನು ನೀವಿಲ್ಲಿ ಬಂದನಂತರ ನನಗೆ ಸ್ಮರಣೆಯುಂಟಾಯಿತು. ಸುಖಲತೆಯೆಲ್ಲಿ? ಎಂದು ಮೇಲಕ್ಕೆದ್ದು ನೋಡಲು ಮಲಗಿದ್ದ ಕಡೆ ಸುಖಲತೆಯಿಲ್ಲದಿರುವುದನ್ನು ಕಂಡು—ಅಯ್ಯೋ! ನನ್ನರಸಿ, ಎಲ್ಲಿ ಹೋದೆ? ನಿನ್ನನ್ನಪಹರಿಸಿದವರ್ಯಾರು? ಹೇಳುವರು ಕೇಳುವರು ಯಾರೂ ದಿಕ್ಕೇ ಇಲ್ಲವೇ? ಮಹಾರಾಜ, ಇದೋ! ಇಲ್ಲಿ ಕಾಣಿಸುತ್ತಿರುವ ಹಲಗೆಯೇ ಮುರಿದದ್ದು ಅದನ್ನು ನೀವಿಬ್ಬರೂ ತೆಗೆದು ನೋಡಿ, ಕೆಳಗೇನಾದರೂ ಗುಪ್ತಮಾರ್ಗವಿರುವುದು ಗೋಚರಕ್ಕೆ ಬರುವುದು. ಎಷ್ಟು ಹೊತ್ತಾಯಿತೋ! ನನ್ನ ರಾಣಿಗೆ ಏನು ವಿಪತ್ತುಂಟಾಯಿತೋ" ಎಂದು ಹೇಳುತ್ತಾ ಅಲ್ಲಿಂದಿಲ್ಲಿಗೆ ಉನ್ಮತ್ತಳೋಪಾದಿಯಲ್ಲಿ ಸುತ್ತುತ್ತಲೇ ಇದ್ದಳು. ಪ್ರತಾಪಸಿಂಹನು ಆ ನೆಲಮಾಳಿಗೆಯಲ್ಲಿಳಿದು ನೋಡಲು ಹದಿನಾಲ್ಕು ಅಡಿ ಆಳವುಳ್ಳದ್ದೊಂದು ಕೊರಡಿ ಇರುವುದನ್ನು ಕಂಡನು. ಅವರಲ್ಲಿ ಮಾನವ ವಾಸದ ಚಿಹ್ನೆಯೇ ಇಲ್ಲ. ಪ್ರತಾಪಸಿಂಹನು ಮೇಲಕ್ಕೆ ಬಾರದಿದ್ದುದನ್ನು ಕಂಡ ಸರ್ದಾರಸಿಂಹನೂ ಆ ನೆಲಮಾಳಿಗೆಯಲ್ಲಿಳಿದು ಹುಡುಕತೊಡಗಿದನು ಚದುರವಾದುದೊಂದು ಕೊಠಡಿಯಾಗಿ ಮಾತ್ರ ವಿದ್ದುದಲ್ಲದೆ, ಹೊರಕ್ಕೆ ಹೋಗಲು ಮಾರ್ಗವಿರುವ ಚಿಹ್ನೆಯೇ ಇಲ್ಲ. ಸುಖಲತೆಯು ಮಲಗಿದ್ದ ಕೊರಡಿಯಂತೆಯೇ ಅದೂ ಒಂದು ಕೊರಡಿಯಾಗಿರುವಂತೆ ಕಂಡುಬಂದಿತು. ಮಿತ್ರರಿಬ್ಬರೂ ಆ ಕೊರಡಿಯ ನಾಲ್ಕು ಕಡೆಯ ಗೋಡೆಯನ್ನು ಸವರಿಸವರಿ ನೋಡಿದರೂ ಏನೂ ತಿಳಿಯದ್ದರಿಂದ ಬಹಳ ದುಃಖದಿಂದ ಮೇಲಕ್ಕೆ ಬಂದು ಅಲ್ಲಿನ ವಿಷಯವನ್ನು ಹೇಳಲು ಪದ್ಮಲತೆಯು ನಂಬದೆ ತಾನೂ ಇಳಿದು ಹುಡುಕಿನೋಡಿದವಳಾಗಿ ಅವರಂತೆಯೇ ಏನೂ ತಿಳಿದುಕೊಳ್ಳಲಾರದೆ ದುಃಖದಿಂದ ಮೇಲಕ್ಕೆ ಬಂದಳು.

ಒಬ್ಬರನ್ನೊಬ್ಬರು ನೋಡಿ ಮೂವರೂ ದುಃಖಿಸಿದರು. ಚೋರನು ನೆಲಮಾಳಿಗೆಯಿರುವ ವಿಷಯವನ್ನರಿತಿರುವಂತೆ ತೋರುವುದು. ಬಂದಿದ್ದವರು ಯಾರೋ ಎಂಬುದನ್ನು ಊಹಿಸಿ ಹೇಳಲು ಪದ್ಮಲತೆಗೆ ಸಾಧ್ಯವಾಗಲಿಲ್ಲ. ಆ ಕಟ್ಟಡ

ದಲ್ಲಿದ್ದ ಬೆಲೆಬಾಳತಕ್ಕ ವಸ್ತುಗಳನ್ನು ಬಿಟ್ಟು ರಾಜಕುಮಾರಿಯನ್ನು ಮಾತ್ರ ಅಪಹರಿಸಲು ಕಾರಣವೇನಿರಬಹುದು? ಈಶ್ವರಾ, ಇಂತಹ ಕೆಲಸವು ನಿನಗೆ ತಕ್ಕದ್ದೇ? ಈ ರೀತಿ ಮಾಡುವುದು ನಿನಗೆ ನ್ಯಾಯವೇ? ಸುಖಲತೆಯ ದರ್ಶನವು ಕೂಡ ನಮಗೆ ದುರ್ಲಭವಾಗುವಂತೆ ಮಾಡಿದೆ. 'ವಿನಾಶಕಾಲೇ ವಿಪರೀತ ಬುದ್ಧಿಃ' ಎನ್ನುವಂತೆ ನನಗೂ ಅವಳನ್ನು ಒಬ್ಬಳೇ ಬಿಟ್ಟುಹೋಗುವ ಬುದ್ಧಿ ಬಂತಲ್ಲಾ'' ಎಂದು ಸರ್ದಾರ್ ಸಿಂಹನು ದುಃಖಿಸಿದನು.

ದುಃಖಿಸುವ ರಾಜಕುಮಾರನಿಗೆ ಸಮಾಧಾನ ಹೇಳಲಸಮರ್ಥನಾದ ಪ್ರತಾಪಸಿಂಹನು ತಾನೂ ದುಃಖಿಸತೊಡಗಿದನು. ರಾಜಕುಮಾರಿಯ ಗುಣಗಳನ್ನು ಹೇಳಿ ಹೇಳಿ ಪದ್ಮಲತೆಯು ಅಳತೊಡಗಿದಳು. ಯಾರು ದುಃಖವನ್ನು ಮೊದಲು ಕಡಮೆ ಮಾಡಿಕೊಂಡು ಇತರರಿಗೆ ಸಮಾಧಾನ ಹೇಳಬೇಕೆನ್ನುವ ತೊಡರಾದ ಸಮಸ್ಯೆಯನ್ನು ಬಿಡಿಸಲು ಮೂವರಲ್ಲಿ ಯಾರೂ ಸಮರ್ಥರಾಗಲಿಲ್ಲ. ಬಹಳ ಹೊತ್ತಾದನಂತರ ಹೀಗೆಯೇ ಇರುವುದರಲ್ಲಿ ಪ್ರಯೋಜನವಿಲ್ಲವೆಂದು ತಿಳಿದು ಪ್ರತಾಪಸಿಂಹನು ಮಹಾರಾಜ, ತಾವು ಧೈರ್ಯವನ್ನು ಕೈ ಬಿಡಕೂಡದು. ಈ ನೆಲಮಾಳಿಗೆಯನ್ನು ಕಟ್ಟಿದ ಶಿಲ್ಪಿಗಳನ್ನು ಕರೆಸಿ ಇದರ ಸೂಕ್ಷ್ಮಮಾರ್ಗವನ್ನು ತಿಳಿಯೋಣ, ಮನುಷ್ಯನೊಬ್ಬನು ಪ್ರವೇಶಿಸಿದ್ದು ನಿಶ್ಚಯವಾದರೆ ಹೊರಟು ಹೋದದ್ದೂ ಅದೇ ಮಾರ್ಗವಾಗಿರಬೇಕಲ್ಲವೇ? ಮಹಾರಾಜ, ಪದ್ಮಲತೆಯನ್ನು ನಗರದಲ್ಲಿರುವ ನಮ್ಮ ಏಕಾಂತ ಗೃಹಕ್ಕೆ ಕಳುಹಿಸಿ, ಅವಳು ಕ್ಷೇಮವಾಗಿರಲು ತಕ್ಕ ವ್ಯವಸ್ಥೆಯನ್ನು ಮಾಡಿ ಈ ರಹಸ್ಯ ಗೃಹದ ವೃತ್ತಾಂತವನ್ನೆಲ್ಲಾ ಸಂಪೂರ್ಣವಾಗಿ ತಿಳಿದುಕೊಳ್ಳೋಣ ಇನ್ನು ಆಲಸ್ಯ ಮಾಡಬಾರದು. ಅರಸಿಯನ್ನಪಹರಿಸಿದ ದುಷ್ಟರನ್ನು ಕಂಡು ಹಿಡಿದು ಅವರನ್ನು ಶಿಕ್ಷಿಸೋಣ' ಎನಲು ಮಹಾರಾಜನು ಆಪ್ತಮಿತ್ರಾ, ನನ್ನ ಪ್ರೇಯಸಿಯು ಮರೆಯಾದಳು ಇನ್ನವಳು ದೊರೆಯುವಳೆನ್ನುವ ನಂಬಿಕೆಯು ನನಗಿಲ್ಲ ನನಗೆ ಯಾರಿಗೂ ಮುಖತೋರಿಸಲಿಷ್ಟವಿಲ್ಲದ್ದರಿಂದ ನಗರದೊಳಕ್ಕೆ ಬರಲಾರೆನು. ಇದೋ ತೆಗೆದುಕೋ ನಿನಗೆ ನನ್ನ ರಾಜ್ಯವನ್ನು ದಾನಮಾಡಿರುವೆನು. ಪದ್ಮಲತೆಯನ್ನು ಮದುವೆಯಾಗಿ ರಾಜ್ಯಾಧಿಕಾರವನ್ನು ವಹಿಸಿ, ಪ್ರಜೆಗಳನ್ನು ನ್ಯಾಯದಿಂದ ಪಾಲಿಸು ನನ್ನನ್ನು ಇನ್ನು ತೊಂದರೆಮಾಡಬೇಡ. ಅವಳನ್ನು ಎಲ್ಲಿ ಬಲಿಕೊಟ್ಟೆನೋ ಅದೇ ನನ್ನ ಮರಣ ಸ್ಥಳವೆಂದರಿ. ಪ್ರತಾಪಸಿಂಹ, ಜಾಗ್ರತೆ ಹೊರಟುಹೋಗು. ಇಲ್ಲದಿದ್ದರೆ ನಿಮಗೂ ಏನಾದರೂ ವಿಪತ್ತು ಸಂಭವಿಸೀತು ಎಂದನು ಅದನ್ನು ಕೇಳಿದ ಪ್ರತಾಪಸಿಂಹನು

'ರಾಜರಾಜೇಶ್ವರಾ, ತಮ್ಮನ್ನೊಂಟಿಯಾಗಿ ಬಿಟ್ಟು ಇದುವರೆಗೂ ನಾನೆಲ್ಲಿಗೂ ಹೋದವನಲ್ಲ. ಹಾಗೆ ಒಂದುವೇಳೆ ಹೋಗಿದ್ದರೂ ಅದು ಕಾರ್ಯಾಂತರದಿಂದಲ್ಲದೆ ಬೇರಲ್ಲ. ನಾನು ಇಲ್ಲಿಂದ ಕದಲಲಾರೆನು ಎಂದು ಪ್ರಾರ್ಥಿಸಿದನು.



## ೧೫ನೆಯ ಅಧ್ಯಾಯವು.

### ಅಂಧಕಾರ ಗುಹೆಯು.!

" ಮಾಯ ಪ್ರಪಂಚವೆ ! ಮತಿಗೆಟ್ಟಮನಸ್ಸೇ ! ಮದೋನ್ಮತನಾದ ಮಾನವ ಜನ್ಮವೆ, ! ಅಸ್ಥಿರವಾದೀ ಶರೀರವನ್ನು ನಂಬಿ ಅಭಿಮಾನಹೊಂದಿ ಮೋಸಹೋಗುವ ಹೃದಯವೇ ವಂಚನೆಯ ಅವತರವಾದ ಶರೀರವೇ! ಕಾಮ-ಕ್ರೋಧ-ಲೋಭ-ಮದ-ಮಾತ್ಸರಾದಿಗಳಿಂದ ತುಂಬಿದ ಪಂಜರವೇ ನಾನಿನ್ನೂ ಈಪ್ರಪಂಚದಲ್ಲಿ ಜೀವಿಸಿರಬೇಕೆ? ವಂಚನೆಯಿಂದ ನನ್ನನ್ನು ಅಪಹರಿಸಿದವರು ಯಾರೋಕಾಣೆನು ವಿಧಾತನೆ, ನಿನಗೆ ಕಣ್ಣಿಲ್ಲವೆ ? ನೀನು ಧರ್ಮಸ್ವರೂಪನೆನ್ನುವುದು ನಿಶ್ಚಯವಾದರೆ ನಾನಿಂತಹ ಕಷ್ಟಗಳನ್ನನುಭವಿಸುತ್ತಿದ್ದೆನೆ ? ನೀನು ಕೃಪಾಮೂರ್ತಿಯೆನ್ನುವುದು ಸತ್ಯವಾದರೆ ನನನ್ನೀಕಷ್ಟಕ್ಕೀಡುಮಾಡಿ ನೋಡಿ ಆನಂದಿಸುತಿದ್ದೆಯಾ? ಈಶ್ವರಾ, ನಾನೇನು ಮಾಡಲಿ ಕರುಣಾ ಸಮುದ್ರನೆ! ನನ್ನನ್ನು ಈ ನಿನ್ನ ಪಾದಾರವಿಂದಕ್ಕೆ ಸೇರಿಸಿಕೋ. ವಿಧಾತನೇ, ನಾನು ಈ ಪ್ರಥ್ವಿಯಲ್ಲಿ ಜೀವಿಸಿರುವುದರಿಂದ ನಿನಗಾಗುವ ಲಾಭವೇನು? ನಾನಿಲ್ಲದಿದ್ದರೆ ನಿನ್ನ ಸೃಷ್ಟಿಕಾರ್ಯವು ಸಾಂಗವಾಗಿ ನೆರವೇರದೇ ಮಾತಾಪಿತೃಗಳು ಪಾಪಿಯಾದ ನನ್ನನ್ನೇಕೆ ಹೆತ್ತುಸಾಕಿದರು, ಅವರ ಮನವೇನುಕಲ್ಲೋ?ನನ್ನನ್ನು ಕಷ್ಟಕ್ಕೀಡು ಮಾಡಿ ತಾವು ಮಾತ್ರ ಆನಂದದಿಂದ ಸುಖದಿಂದ ಇರುವರು. ದೇವಾ ನಾನೆಲ್ಲಿಹೋಗಲಿ? ಏನುಮಾಡಲಿ! ಹೇದಯಾಪರಾ! ಜನಾರ್ದನಾ! ಭಕ್ತಪ್ರಿಯಾ! ಆಪದ್ಬಾಂದವ! ನನಗೋಸುಗನಿನ್ನ ಕಿವಿಯನ್ನು ಮುಚ್ಚಲಿಲ್ಲವೆ? ನನ್ನೇಕೆ ಈರೀತಿ ಶೋಧಿಸುವೆ? ನಿರ್ಮಾನುಷ್ಯವಾದೀಗುಹೆಯಲ್ಲಿ ನನ್ನಕಾಲವನ್ನು ಹೇಗೆ ಕಳಿಯಲಿ? ನನ್ನಕಷ್ಟವನ್ನು ಯಾರಲ್ಲಿ ಮೊರೆಯಿಡಲಿ ಈ ಅಂಧಕಾರ ಗುಹೆಯಲ್ಲಿ ನಾನು ಗೋಳಾಡುತ್ತಿರುವುದು. ಸರ್ವಗೋಚರನಾದ ನಿನ್ನ ದೃಷ್ಟಿಗೆ ಬೀಳಲಿಲ್ಲವೇ ? ಜೀವಿಸಿರುವುದು ನನ್ನ ಗಿಷ್ಟವಿಲ್ಲ-ನಾನೀಗಮರಣವನ್ನು ಕೋರುತ್ತಿರುವೆನು. ಆದರೆ ಹೇಗೆ ಸಾಯಬೇಕೆನ್ನುವುದು ನನಗೆ ತಿಳಿಯದು. ವಾಯುಸಂಚಾರವಿಲ್ಲದ್ದರಿಂದ ಉಸಿರುಕಟ್ಟುತ್ತಿರುವು

ದು. ಕೈಕಾಲುಗಳಲ್ಲಿ ಶಕ್ತಿಯಿಲ್ಲ. ಕರುಣಾಕರಾ, ನನ್ನನೇನುಮಾಡಬೇಕೆಂದು ನಿನ್ನ ಇಚ್ಛೆಯಿರುವುದು?'' ಎಂದ. ಪಾತಾಳಗುಹೆಯಲ್ಲಿದ್ದ ರಮಣಿಯೊಬ್ಬಳು ಪ್ರಲಾಪಿಸುತ್ತಿದ್ದಳು

ಜನಶೂನ್ಯವಾದ ಸ್ಥಳದಲ್ಲಿ ಇವಳ ಆರ್ತನಾದವನ್ನು ಕೇಳುವವರು ಯಾರು? ಅತ್ತುಅತ್ತುಬೇಸತ್ತಳು, ಕೂಗಿಕೂಗಿ ಬಳಲಿದಳು, ಮನವುಕಲ್ಲಾಯಿತು. ಏನುಮಾಡಬೇಕೆನ್ನುವುದು ತಿಳಿಯಲ್ಲಿಲ್ಲ. ಎದ್ದು ತಿರುಗಾಡೋಣವೆಂದರೆ ಕೈಕಾಲುಗಳಲ್ಲಿ ಬಲವಿಲ್ಲ ಸುರಿಸಿದ ಕಣ್ಣೀರಿಗೆ ಮಿತಿಯಿಲ್ಲ. ಜ್ಞಾನನಿಧೀ ಅನಾಥರಕ್ಷಕನು ಸಜ್ಜನರನ್ನು ರಕ್ಷಿಸುವನೆಂದು ಹಿರಿಯರು ಹೇಳುವುದು ಸುಳ್ಳೇ?'' ಎಂದು ಪರಿತಾಪದಿಂದ ಮೊರೆಯಿಡುತ್ತಿರಲು ಯಾರೂೀ ಕೆಳಗೆ ಕಂಡುಬರುವಂತೆ ಮಾತನಾಡುವ ಶಬ್ದವು ಕಿವಿಗೆ ಬಿದ್ದಿತು. ''ಬೆಳಗಾದರ ಗೋಳು, ಇದೇನವಸ್ಥೆ! ಜಾತಿಯಂತೆ-ಕುಲವಂತೆ-ಮತಬಂಧವಂತೆ. ನನ್ನಿಂದ ಶಾಸ್ತ್ರವಚನಗಳನ್ನು ಓದುವುದಕ್ಕಾಗುವುದಿಲ್ಲ. ಅದನ್ನೊಪ್ಪಿಸದಿದ್ದರೆ ಆವತ್ತು ಏಕಾದಶಿ! ಗುರುಗಳ ಕಾಟ ಶನೀ ಹಿಡಿದಂತೆ ಎಷ್ಟು ಹೇಳಿದರೂ ಆ ಪಾರ ನನ್ನ ಕಿವಿಯೊಳಕ್ಕೇ ಹೋಗದಿದ್ದರೆ ನಾನೇನು ಮಾಡಲಿ? ನನ್ನನ್ನು ಮಡ್ಡಿ, ಮೂಢ, ಮುಟ್ಠಾಳ ಎಂದು ಎಲ್ಲರೂ ಕರೆಯುತ್ತಾರೆ ನಾನು ಯಾರಿಗೂ ಕಾಣದೆ ಓಡಿಬಂದು ಬಿಟ್ಟೆ. ಇನ್ನು ಬದುಕಿದೆ. ನನ್ನನ್ನೆಲ್ಲಿ ಅಟ್ಟಿಸಿಕೊಂಡು ಬಂದು ಹಿಡೀತಾರೋಂತ ಇಲ್ಲಿ ಬಚ್ಚಿಟ್ಟುಕೊಂಡಿದ್ದೆ ಶನಿ ತೊಲಗಿತು. ಇನ್ನು ನಾನು ಕಲಿತಿರುವ ವಿದ್ಯೆಯ ಸಹಾಯದಿಂದ ಮಹಾರಾಜನ ಬಳಿಗೆಹೋಗಿ ಸುಖವಾಗಿ ಬದುಕಬಹುದು ಆ ಗುರು ಪೀಡೆಯು ನಾನಿಲ್ಲಿರುವುದನ್ನು ಕಂಡು ನನ್ನ ಜುಟ್ಟು ಹಿಡಿದುಕೊಂಡರ ನಾನೇನು ಮಾಡಲಿ? ಒಂದೆರಡು ದಿನ ಇಲ್ಲಿಯೇ ಮರೆಯಾಗಿದ್ದರೆ ಸರಿಹೋಗುತ್ತೆ. ಲಲಿತಾ ಸಹಸ್ರವನ್ನೋದಿದರೆ ಪಾರ್ವತಿಯು ಪ್ರತ್ಯಕ್ಷಳಾಗುವಳೆಂದು ಗುರುಗಳು ಹೇಳಿದ್ದರು. ಎಲ್ಲಿ ಬಂದಳು? ಪಾರ್ವತಿಯೂ ಇಲ್ಲ; ದುರ್ಗೆಯೂ ಇಲ್ಲ ಶಾಂಭವಿಯ ಹೆಸರು ಹೇಳಿಹೇಳಿ ಮೂರು ದಿನ ಅತ್ತೆನು. ಎಲ್ಲಿ ಬಂದಳು? ಅವಳಿದ್ದರಲ್ಲವೇ ಬರುವುದಕ್ಕೆ? ಇನ್ನು ನಾನು ಎಂದೆಂದಿಗೂ ದೇವರಿಗೆ ನಮಸ್ಕಾರಮಾಡುವುದೇ ಇಲ್ಲ. ದೇವರು ದಿಂಡರು ಎಂದು ಹೇಳುವುದೆಲ್ಲಾ ಬರೀ ಸುಳ್ಳು. ಓದುವ ಹುಡುಗರನ್ನು ಮೋಸಮಾಡುವುದಕ್ಕೆ ಗುರುಗಳು ಕಲಿತಿರೋ ತಂತ್ರ!'' ಮೇಲೆ ಹೇಳಿದ ವಾಕ್ಯಗಳನ್ನು ಕೇಳಿದ ಆ ಅಂಧಕಾರ ಗುಹಾ ವಾಸಿಯಾದ ರಮಣಿಯು ಸಮಯೋಚಿತವಾಗಿ ಅಲ್ಲಿಂದ ತಪ್ಪಿಸಿಕೊಂಡು ಹೋಗಲು ಒಂದುಪಾಯವನ್ನು ಯೋಚಿಸಿ–''ಹೇ ಬಾಲಕಾ, ಚಿಂತಿ

ಸಬೇಡ: ನಿನ್ನನ್ನು ಏಕಾಂತವಾಗಿ ಕಂಡು ವರಕೊಡಬೇಕೆಂಬ ಉದ್ದೇಶದಿಂದ ಈ ಗುಹೆಯೊಳಗೆ ನಾನು ಬಂದೆನು. ಕಪಟರಹಿತವಾದ ನಿನ್ನ ಗುಣಕ್ಕೆ ನಾನು ಮೆಚ್ಚಿದೆನು. ಭಯಪಡದೆ ಬಾಗಿಲನ್ನು ತೆರೆದುಕೊಂಡು ಗುಹೆಯೊಳಕ್ಕೆ ಬಂದು ನನ್ನನ್ನು ನೋಡು. ನೀನು ಕೋರಿದ ವರವನ್ನು ಕೊಡುವೆನು'' ಎನಲು ಇದನ್ನು ಕೇಳಿದಕೂಡಲೇ 'ತಾಯಿ, ಕ್ಷಮಿಸು, ನಿನ್ನನ್ನು ಇಷ್ಟು ಹೊತ್ತೂ ಮನಬಂದಂತೆ ದೂಷಿಸಿದೆನು. ನನ್ನ ಅಪರಾಧವನ್ನು ಮರೆತು ಕೃಪೆಮಾಡು ಇದೋ! ಸನ್ನಿಧಾನಕ್ಕೆ ಬಂದೆನು. ತಾಯಿ, ರಕ್ಷಿಸು'-ಎಂದು ಹೇಳುತ್ತಾ ಬಾಗಿಲನ್ನು ತೆರೆದುಕೊಂಡು ಮೃಗಸ್ವಭಾವವುಳ್ಳ ಪುರುಷನೊಬ್ಬನು ಗುಹೆಯೊಳಕ್ಕೆ ಬಂದನು.

ರಮಣಿಯು ಅವನನ್ನಾಶೀರ್ವದಿಸಿ-'ಹೇ ಮಾನವ, ನಾನು ಸ್ತ್ರೀ ರೂಪವಾಗಿರುವುದನ್ನು ನೋಡಿ ಆಶ್ಚರ್ಯಪಡಬೇಡ. ವರಕೊಡುವಾಗ ಭಕ್ತಾದಿಗಳ ಮನೋಸಂಕಲ್ಪದಂತೆಯೇ ರೂಪಧಾರಣೆಮಾಡುವುದು ದೇವರ ಸ್ವಭಾವವು. ಇಂದಿನಿಂದ ನಿನಗೆ ಯಾವ ಕಷ್ಟವೂ ಸಂಭವಿಸದು. ನಾನೂ ಆ ಕಡೆ ಬರುತ್ತೇನೆ' ಎಂದು ಹೇಳುತ್ತಾ ಮಂದಮತಿಯು ಬಂದ ಮಾರ್ಗವಾಗಿಯೇ ತಾನೂ ಗುಹೆಯಿಂದೀಚೆಗೆ ಬಂದಳು. ಅವನೂ ಕೈ ಜೋಡಿಸಿಕೊಂಡು ಅವಳ ಹಿಂದೆಯೇ ಬಂದನು. ಗುಹೆಯಿಂದ ಹೊರಗೆ ಬಂದಕೂಡಲೇ ರಮಣಿಯು ನಾಲ್ಕು ಕಡೆಯೂ ಸುತ್ತಿ ಸುತ್ತಿ ನೋಡಿದಳು. ಚಿಕ್ಕ ಚಿಕ್ಕ ಗುಡ್ಡಗಳೂ, ಗಿಡಗಳೂ ಇದ್ದವು ಆ ಗುಹೆಯು ಪಾತಾಳದಲ್ಲಿದ್ದುದರಿಂದ ಭೂಮಿಗೆ ಬರಲು ರಮಣಿಯು ಬಹಳ ಪ್ರಯಾಸಪಟ್ಟಳು. ಅನ್ನಾಹಾರವಿಲ್ಲದ್ದರಿಂದಲೂ, ಮನೋಸಂಕಟದಿಂದಲೂ ನಡೆಯಲಾಗಲಿಲ್ಲ. ಜಡಭರತನಂತಿದ್ದ ಮೂಢನು ಅಮ್ಮಾ, ಸ್ವಲ್ಪ ತಡೆ, ನಿನ್ನಿಂದ ನಡೆಯಲಾಗುವುದಿಲ್ಲ. ನನ್ನ ಗುರುವಿನ ಬಳಿ ಒಂದು ಪಲ್ಲಕ್ಕಿ ಇದೆ, ಅದನ್ನು ತರುತ್ತೇನೆ. ನೀನು ಅದರಲ್ಲಿ ಕುಳಿತುಕೊಂಡರೆ 'ನಾನು ಹೊತ್ತುಕೊಂಡು ಹೋಗುತ್ತೇನೆ' ಎಂದು ಹೇಳುತ್ತಾ ಉತ್ತರನಿರೀಕ್ಷಣೆಮಾಡದೆಯೇ ಓಡಿಹೋದನು.

'ಬೇಡ, ನಾನು ನಡೆದುಕೊಂಡು ಬರುತ್ತೇನೆ' ಎಂದು ಹೇಳುತ್ತಾ ಮಂದಮತಿಯಿದ್ದ ಕಡೆ ತಿರುಗಿ ನೋಡಲು, ಅವನು ಬಹಳ ದೂರ ಹೊರಟುಹೋದದ್ದನ್ನು ಕಂಡ ರಮಣಿಯು ಅರಣ್ಯದಲ್ಲಿ ಪುನಃ ಒಂಟಿಯಾಗಿ ನಿಂತಿದ್ದಕ್ಕಾಗಿ ಭಯಹೊಂದಿದಳು. ಸ್ವಲ್ಪಹೊತ್ತಿಗೆಲ್ಲಾ ಕೆಲವು ಜನರನ್ನು ಕರೆದುಕೊಂಡು ಮಂದಮತಿಯು ಪ್ರವೇಶಿಸಿ, 'ನಾನು ಹೇಳಿದ ದೇವೀಮೂರ್ತಿಯು ಇವಳೇ' ಎಂದು ಹೇಳುತ್ತಾ ಅಡ್ಡಬಿದ್ದು ನಮಸ್ಕಾರಮಾಡಿದನು.

ಪ್ರಸನ್ನ ವದನದಿಂದ ರಮಣಿಯು-'ಸಹೋದರರೇ, ನೀವೆಲ್ಲಿಂದ ಬಂದಿರಿ? ನಿಮ್ಮ ವಾಸಸ್ಥಳವಾವುದು? ಅದನ್ನು ನನಗೆ ತಿಳಿಸಿರಿ. ನೀವು ಸುಖದಿಂದ ಬಾಳಿರಿ.' ಎಂದು ಆಶೀರ್ವದಿಸಲು ಅವರು-"ತಾಯೇ, ಅದೋ ಕಾಣುವ ಬೆಟ್ಟದಮೇಲೆ ನಾವು ವಾಸಮಾಡುತ್ತೇವೆ. ಬಿಕನೀರರಸನು ನಮಗೆ ಪುರಾತನಶಾಸ್ತ್ರ ವಚನಗಳನ್ನು ಕಲಿಸಲು ಒಬ್ಬ ಗುರುವನ್ನು ನಿಯಮಿಸಿರುವನು. ಆ ಗುರುವನ್ನು ಸಾಕ್ಷಾತ್ ಸದಾಶಿವ ಮೂರ್ತಿಯೆಂದೇ ಹೇಳಬೇಕು. ಚತುಶ್ಶಾಸ್ತ್ರಪಂಡಿತರು, ಮಹಾಯೋಗಿ, ಸಮಸ್ತ ಕಲಾಕೋವಿದರು, ದಿಕ್ಕಿಲ್ಲದವರನ್ನು ರಕ್ಷಿಸುವ ಕೃಪಾನಿಧಿಯು. ಆತನ ಮಹಿಮೆಯನ್ನು ವರ್ಣಿಸಲಾರಿಂದ ಸಾಧ್ಯವು? ತಾವು ನಮ್ಮ ಗುರುವಿನ ಆಶ್ರಮಕ್ಕೆ ಬರಬೇಕು. ಈ ಮೂಢನು ಗುರುವಿನ ಬಳಿ ಬಂದು 'ಭಾರತೀದೇವಿಯು ನನಗೆ ಪ್ರತ್ಯಕ್ಷವಾಗಿರುವಳು ಅವಳನ್ನಾಶ್ರಮಕ್ಕೆ ಕರತರಲು ಪಲ್ಲಕ್ಕಿ ಬೇಕು, ಕೊಡಿ'-ಎಂದು ಪೀಡಿಸಲು ಅವರು ನಗುತ್ತಾ ವಿಷಯವನ್ನರಿತು ಬರುವಂತೆ ನಮ್ಮನ್ನು ಕಳುಹಿಸಿದರು. ತಾವು ಯೋಚನೆಮಾಡದೆ ನಮ್ಮೊಡನೆ ಬರಬೇಕೆಂದು ಪ್ರಾರ್ಥಿಸುತ್ತೇವೆ"-ಎಂದರು.

ರಮಣಿಯು ಭಯವನ್ನು ಬಿಟ್ಟು ಈಶ್ವರನನ್ನು ಧ್ಯಾನಿಸುತ್ತಾ ಅವರನ್ನು ಹಿಂಬಾಲಿಸಿ ಬಲಹೀನವಾಗಿದ್ದ ಕಾಲುಗಳಲ್ಲಿ ಹೇಗೋ ಬಲವುಂಟಾಗಲು, ಭಗವಂತನ ಮಹಿಮೆಯನ್ನು ಕೊಂಡಾಡುತ್ತಾ ಹೊರಟುಹೋದಳು.



## ೧೬ನೆಯ ಅಧ್ಯಾಯವು.

### ಅನಸೂಯಾ.

ಬಿಕನೀರರಸನಾದ ಸರ್ದಾರ್‌ಸಿಂಹನು ಅಲ್ಲಿನ ಕೆಲವು ಜನ ಬಾಲಕರಿಗೆ ಪ್ರಾಚೀನಶಾಸ್ತ್ರಾಭ್ಯಾಸಕ್ಕಾಗಿ ಒಂದು ಗುರುಕುಲವನ್ನೇರ್ಪಡಿಸಿದ್ದನು. ಅಲ್ಲಿ ಸುಮಾರು ಮೂವತ್ತು ಜನ ಬಾಲಕರು ಶಾಸ್ತ್ರಾಭ್ಯಾಸಮಾಡುತಿದ್ದರು. ಈಗಿನ ವಿಶ್ವಕಲಾಶಾಲೆ (University)ಗಳ ಪದ್ಧತಿಯಂತಲ್ಲದೆ, ಪ್ರಾಚೀನಕಾಲದಲ್ಲಿ ಉಪನಯನ ಸಂಸ್ಕಾರವು ಪೂರೈಸಿದ ಕೂಡಲೇ ಬಾಲಕರು ಇಂತಹ ಗುರುಕುಲಗಳಿಗೆ ಕಳುಹಿಸಲ್ಪಡುತ್ತಿದ್ದರು. ಗುರುವು ತಾನು ಕಲಿತ ವಿದ್ಯೆಯನ್ನೇ ಶಿಷ್ಯರಿಗೆ ಬೋಧಿಸುತ್ತಿದ್ದನಲ್ಲದೆ, ಅವನಿಗೆ ನಿರ್ಬಂಧವಾಗಲಿ, ಮತ್ತಾವ ತೊಂದರೆಯಾಗಲಿ ಇರಲಿಲ್ಲ (ನೂರೆಂಟು ಕಮಿಟಿಗಳು, ಸಾವಿರಾರು ಸದಸ್ಯರು, ಸರ್ಕಾರದವರ ಪ್ರತಿಬಂಧನ,

ದ್ರವ್ಯಾಭಾವ ಮೊದಲಾದ ಕೊರತೆಗಳೊಂದೂ ಇರಲಿಲ್ಲ.) ಗುರುವು ಸಂಸಾರಸಮೇತ ಗುರುಕುಲದಲ್ಲಿದ್ದುಕೊಂಡು ತನ್ನ ಶಿಷ್ಯರ ಊಟ ಉಡಿಗೆ ಮೊದಲಾದವುಗಳ ಅನುಕೂಲವನ್ನು ಸ್ವತಃ ನೋಡಿಕೊಳ್ಳುತಿದ್ದನು. ಜನಸಮೂಹವು ಹೆಚ್ಚಾಗಿರದೆ ಆರೋಗ್ಯಸಾಧನಕ್ಕನುಕೂಲವಾಗಿ, ನಿಬಿಡವಾದ ವೃಕ್ಷರಾಶಿಗಳಿಂದ ಕೂಡಿ, ಪ್ರಕೃತಿ (Nature) ದೇವಿಯ ಸೌಂದರ್ಯದಿಂದ ತುಂಬಿ ತುಳುಕುತ್ತಲೂ, ಪಟ್ಟಣದಿಂದ ಬಹಳ ದೂರದಲ್ಲಿ ವಿವಿಧಪುಷ್ಪಗಳಿಂದ ತುಂಬಿದ ವನಲತೆಗಳಿಂದಲೂ, ನಾನಾಜಾತಿ ಪಕ್ಷಿಗಳ ಕಿಲಕಿಲನಿನಾದದಿಂದಲೂ ಕೂಡಿದ ಒಂದು ವನಮಧ್ಯದಲ್ಲಿ ಈಗಿನಂತೆ ಲಕ್ಷೋಪಲಕ್ಷ ದ್ರವ್ಯ ವ್ಯಯಮಾಡಿ ಕಟ್ಟಿಸಿರುವ ಭಾರಿಭಾರಿ ಗಗನವನ್ನು ಮುಟ್ಟುವ ಕಟ್ಟಡಗಳಿಲ್ಲದೆ ಮರಗಳ ಕೆಳಗೋ ತಣ್ಣನೆ ಬೀಸುವ ತಂಗಾಳಿಯಿಂದ ಕೂಡಿ ಕರ್ಣಾನಂದಗೈಯುತ್ತಾ ಪ್ರವಹಿಸುತ್ತಿರುವ ನದೀತೀರದಲ್ಲೋ ಇಂತಹ ಗುರುಕುಲಗಳಿರುತಿದ್ದವು. ಇಂತಹ ಗುರುಕುಲಗಳಿಗೆ ರೋಗಗಳ ಸೋಂಕು ಹೆಚ್ಚಾಗಿ ಸೇರುತಿರಲಿಲ್ಲ ಅಲ್ಲಲ್ಲಿನ ಅರಸರ ಆಶ್ರಯದಿಂದ ಇಂತಹ ಗುರುಕುಲಗಳು ನಡೆಯುತಿದ್ದವು. ಗುರುವಿನ ಮನೆಗೆ ಸೌದೆ ತಂದುಹಾಕುವುದು, ನೀರು ಹೊರುವುದು, ಪೂಜೆಗೆ ಪುಷ್ಪಗಳನ್ನೊದಗಿಸುವುದು, ದನ-ಕರು ಮೇಯಿಸುವುದು, ಬಟ್ಟೆಬರೆಗಳನ್ನೊಗೆಯುವುದು—ಇತ್ಯಾದಿ ಕಾರ್ಯಗಳು ಗುರುದಕ್ಷಿಣೆಯಾಗಿರುತಿದ್ದುವಲ್ಲದೆ, ಈಗಿನಂತೆ ಓದಲಿ ಓದದೇ ಹೋಗಲಿ ಮೂವತ್ತು ದಿನಗಳು ಕಳೆಯುವುದನ್ನೇ ಕಾಯುತ್ತಾ ಶಾಲಾಧನ(School fee) ವನ್ನು ಕೊಡಿಸುವ ಪದ್ಧತಿಯು ಪ್ರಾಚೀನಕಾಲದಲ್ಲಿರಲಿಲ್ಲ. ಈಗಿನಂತೆ ಒಂದು ಪದವಿಗಾಗಿ ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಬೇಕಾಗಿರಲಿಲ್ಲ ವಿದ್ಯಾರ್ಥಿಗಳ ಊಟದ ಖರ್ಚುಕೂಡ ತಾಯಿತಂದೆಗಳಿಗಿರಲಿಲ್ಲ. ವಿದ್ಯಾರ್ಥಿಗಳು ಹದಿನೇಳು ಹದಿನೆಂಟು ವರ್ಷಗಳು ಶಾಸ್ತ್ರಾಭ್ಯಾಸಮಾಡಿ ಆರೋಗ್ಯದೃಢಕಾಯರಾಗಿ ಸಂಸಾರನಿರ್ವಾಹಶಕ್ತಿಯನ್ನು ಹೊಂದಿಬರುತಿದ್ದರು ಇಂತಹ ಗುರುಕುಲವು ಈಗಲೂಕೂಡ ಪ್ರಸಿದ್ಧ ಭಾರತ ಕವೀಂದ್ರ ಠಾಕೂರರಿಂದ ಬೋಲ್ಪುರದಲ್ಲಿಯೂ, ಸ್ವಾಮಿ ಶ್ರದ್ಧಾನಂದರಿಂದ ಹರಿದ್ವಾರದಲ್ಲಿಯೂ ಸ್ಥಾಪಿಸಲ್ಪಟ್ಟಿರುವುದು.

ಮಂದಮತಿ ಮೊದಲಾದವರನ್ನನುಸರಿಸಿಹೋದ ರಮಣಿಯು ಬಾಲಕರೊಡನೆ ಆ ಗುರುಕುಲವನ್ನು ಸೇರಿ ಮೂರು ನಾಲ್ಕು ದಿನಗಳಾದವು. ಒಂದು ದಿನ ಗುರುಪತ್ನಿಯೂ, ರಮಣಿಯೂ ಕೆಳಗೆ ಕಂಡು ಬರುವಂತೆ ಸಂಭಾಷಿಸುತ್ತಿದ್ದರು. ಗುರುದಂಪತಿಗಳು ಪ್ರೇಮವಾತ್ಸಲ್ಯದಿಂದ ರಮಣಿಗೆ 'ಅನಸೂಯಾ' ಎಂದು ನಾಮಕರಣ ಮಾಡಿದ್ದರು.

'ತಾಯಿಾ, ನನಗೆ ಜನ್ಮವನ್ನಿತ್ತ ಮಾತೆಯನ್ನರಿಯೆನು; ಪ್ರೀತಿಯಿಂದ ಕಾಣು ವರನ್ನು ಅರಿಯೆನು. ನನ್ನ ಭಾಗದ ದೈವದಂತೆ ನೀವು ದೊರೆತಿರಿ. ಈ ಆಶ್ರಮಕ್ಕೆ ಬಂದುದು ಮೊದಲು ನನ್ನ ಮನಶ್ಶಾಂತಿಗೂ ಆನಂದಕ್ಕೂ ಮಿತಿಯೇ ಇಲ್ಲ. ಅಮ್ಮಾ ನನ್ನಲ್ಲಿ ನೀವಿಟ್ಟಿರುವ ಪ್ರೀತಿ-ವಿಶ್ವಾಸಕ್ಕೆ ಪ್ರತಿಯಾಗಿ ನಾನೇನುಪಕಾರವಮಾಡಬಲ್ಲೆನು? ಗುರುಮಹಾರಾಜರು ಕೂಡ ನನ್ನಲ್ಲಿ ಪುತ್ರೀನಿರ್ವಿಶೇಷ ಪ್ರೇಮವನ್ನಿಟ್ಟಿರುವರು. ಸಮಸ್ತ ಶಿಷ್ಯವರ್ಗವೂ ನನ್ನನ್ನು ಸೋದರೀ ಪ್ರೇಮದಿಂದ ಕಾಣುತ್ತಿರುವುದು. ನನ್ನ ದುಃಖವೆಲ್ಲವೂ ನಿಮಿಷ ಮಾತ್ರದಲ್ಲಿ ಮಾಯವಾಯಿತು. ಇಲ್ಲಿ ನಡೆಯುತ್ತಿರುವ ಶಾಸ್ತ್ರಪಾರವನ್ನು ನಾನು ಪರ್ಣಶಾಲೆಯ ಹಿಂದೆ ನಿಂತು ಕೇಳುತ್ತಿರುವುದರಿಂದ ನನಗೂ ಕಂಠಪಾಠವಾಯಿತು. ಎಲ್ಲವೂ ಮಾತೆಯಾದ ನಿಮ್ಮ ಕೃಪಾವಿಶೇಷವಲ್ಲವೇ?

'ವತ್ಸೇ, ರಾಜರಾಜೇಶ್ವರಿಯಾಗುವ ಅದೃಷ್ಟವು ನಿನಗಿರುವುದು. ಶೀಘ್ರದಲ್ಲಿಯೇ ನಿನಗೆ ಸಕಲ ಮಂಗಳವೂ ಉಂಟಾಗುವುದು ನಿರಪರಾಧಿಯಾದ ನಿನ್ನಲ್ಲಿ ಈಶ್ವರನಿಗೆ ಬಹಳ ಪ್ರೀತಿಯೂ, ಅನುಗ್ರಹವೂ ಇರುವುದರಿಂದ ನಿನಗೆ ಭಯವೇಕೆ?' ಎಂದು ಹೇಳಿ ರಮಣಿಯನ್ನು ಪ್ರೇಮಾತಿಶಯದಿಂದಾಲಿಂಗಿಸಿದಳು.

ಇವರಿಬ್ಬರ ಸಂಭಾಷಣಾಮಧ್ಯದಲ್ಲಿ ಮಂದಮತಿಯು ತೋರಿ-''ಮಾತೆಯರೇ, ನಾಳೆಯ ದಿನ ಆಶ್ರಮಕ್ಕೆ ಮಹಾರಾಜರು ಬಂದು ನಮ್ಮೆಲ್ಲರನ್ನೂ ಪರೀಕ್ಷೆ ಮಾಡುವರಂತೆ ಅರಸನು ಬಂದರೆ ನನ್ನ ಗತಿ ಅಧೋಗತಿಯೇ! ಉಳಿದ ವಿದ್ಯಾರ್ಥಿಗಳೆಲ್ಲರೂ ಸರಸರನೆಂದು ಶ್ಲೋಕ, ಅರ್ಥ, ಪದವಿಭಾಗ ಮೊದಲಾದವುಗಳೆಲ್ಲವನ್ನೂ ಹೇಳುವಾಗ ನಾನು ಮೆಲ್ಲಗೆ ತಪ್ಪುತಪ್ಪಾಗಿ ಹೇಳಿದರೆ ಅವರು ಕೇಳುತ್ತಾರೆಯೇ? ಉಪಾಧ್ಯಾಯರೇ ಮೊದಲು ಹೊಡೆಯುತ್ತಾರೆ. ನಾನೇನು ಮಾಡಲಿ? ನನಗೆ ಪ್ರಸನ್ನಳಾದ ದೇವೀ, ನೀನೇ ನನ್ನನ್ನು ರಕ್ಷಿಸಬೇಕು '' ಎಂದು ಹೇಳಿ ಅವರಿಬ್ಬರ ಪಾದಗಳಿಗೂ ಬಿದ್ದು ಬಿದ್ದು ನಮಸ್ಕರಿಸಿದನು ಮಂದಮತಿಯ ಚರ್ಯೆಯನ್ನು ಕಂಡು ರಮಣಿಯರಿಬ್ಬರೂ ಬಹಳ ನಕ್ಕರು. ಗುರುಪತ್ನಿಯು ಪರಿತಾಪದಿಂದ ಅವನನ್ನು ಸಂತೈಸಿ, ರಮಣಿಯ ಕಡೆ ತಿರುಗಿ—'ಅನಸೂಯಾ, ಇವನೊಂದು ಸಾಧುಪ್ರಾಣಿ; ಕಪಟರಹಿತನು, ಜ್ಞಾನಶೂನ್ಯನು; ನಿನ್ನ ಜನಕನು ಇವನಿಗೆ ವಿದ್ಯೆ ಕಲಿಸಲು ನಾನಾ ವಿಧವಾದ ಪ್ರಯತ್ನಗಳನ್ನು ಮಾಡಿಯೂ ಪ್ರಯೋಜನವಾಗಲಿಲ್ಲ. ಕಂದಮೂಲ ಫಲಾದಿಗಳನ್ನು ತರುವುದಕ್ಕಾದರೂ ಪ್ರಯೋಜನವಾಗುವುದೆಂದು ಇಲ್ಲಿಟ್ಟುಕೊಂಡಿರುವರು. ನೀನು ಬರುವುದಕ್ಕೆ ಮೂರು ದಿನಗಳ ಮುಂಚೆ ಎಲ್ಲಿಯೋ ಮಾಯವಾದ

ವನು ನಿನ್ನನ್ನೂ ಕರೆದುಕೊಂಡು ಎರಡು ಮೂರು ದಿನಗಳ ಹಿಂದೆ ಬಂದನು. ಈ ಮೂರ್ಖನನ್ನು ಕಾಣದೆ ನಾನು ಪಟ್ಟ ಅವಸ್ಥೆಯನ್ನು ಎಷ್ಟು ಹೇಳಲಿ? ಸಾಕ್ಷಾತ್ ಮಹಾ ಲಕ್ಷ್ಮಿಯಂತಹ ನೀನು ಅವನ ಮುಂದೆ ತೋರಿದ್ದರಿಂದ ನಿನಗೆ ಅವನು ಸಹಾಯಮಾಡಲು ಅವಕಾಶವಾಯಿತು. ಮಗೂ, ನೋಡಿದೆಯಾ? ಮೂರ್ಖನಾದರೂ ನಮಗನೇಕ ಉಪಕಾರಗಳು ಅವನಿಂದುಂಟಾಗುವುದರಿಂದ ಭಗವತ್ಸೃಷ್ಟಿಯ ಯಾವ ವಸ್ತುವೂ ನಿಷ್ಪ್ರಯೋಜನವಾದುದೆಂದು ಹೇಳಲಾಗುವುದಿಲ್ಲ. ಪಾಪ! ಹಸುವಿನಂತೆ ಸಾಧುಪ್ರಾಣಿ, ಒಂದೊಂದುವೇಳೆ ಕೋಪಗೊಂಡು ಒರಟುತನದಿಂದ ಎಲ್ಲರನ್ನೂ ಹೊಡೆಯುವುದಕ್ಕೆ ಹೋಗುವನು, ಜಗಳವಾಡುವನು. ಮಾತಾಪಿತೃ ವಿಹೀನನಾದುದರಿಂದಲೂ, ಮತಿಹೀನನಾದುವರಿಂದಲೂ ನಿನ್ನ ಜನಕನು ಅವನನ್ನು ಹೆಚ್ಚಾಗಿ ಶಿಕ್ಷಿಸುವುದಿಲ್ಲ. ಈ ದಿನ ಮಹಾರಾಜನು ಬರುವ ವರ್ತಮಾನವನ್ನು ಕೇಳಿ ಕೈಕಾಲು ನಡುಗುತ್ತಾ ಓಡಿಬಂದನು. ನೀನು ಸಮಾಧಾನ ಹೇಳಿದೆಯಾದರೆ ಶಾಂತನಾಗುವನು' ಎಂದಳು

ಅನಸೂಯೆಯು ಕರುಣದಿಂದ—'ನೀನು ಹೆದರಬೇಡ, ನಿನ್ನನ್ನು ಪಾರಕೇಳದಿದಿರುವಂತೆ ನಾನು ಹೇಳುತ್ತೇನೆ' ಎನಲು, ಮಂದಮತಿಯು 'ಬದುಕಿದೆ, ಬದುಕಿದೆ, ಸತ್ತವನು ಬದುಕಿದೆ. ವೀರ, ವಿಕ್ರಮ, ಗಂಗಾಧರ, ಪಶುಪತಿ ಮೊದಲಾದವರೆಲ್ಲರೂ ನನ್ನನ್ನು ಹೆದರಿಸಿದರು, ನಾನು ಬಾಯಿ ಬಿಡಲಿಲ್ಲ ಇಲ್ಲಿಗೆ ಬಂದೆ'' ಎಂದು ಆನಂದದಿಂದ ಕೈಜೋಡಿಸಿಕೊಂಡು ಓಡಿಹೋದನು

ಮಂದಮತಿಯು ಈ ರೀತಿ ಓಡಿಹೋದುದನ್ನು ಕಂಡ ಅನಸೂಯೆಯೂ ಸುಮನೆಯೂ ನಗಲಾರಂಭಿಸಿದರು. ಆಗ ಸ್ವಲ್ಪ ಸುಮ್ಮನಿದ್ದನಂತರ ಅವರಿಬ್ಬರೂ ಈ ರೀತಿ ಸಂಭಾಷಿಸತೊಡಗಿದರು.—

ಅನಸೂಯ-ಅಮ್ಮಾ, ಯಾವ ಊರಿನ ಅರಸನು ಬರುವನು? ಈಪರ್ವತದಲ್ಲಿ ಅವರಿಗೇನು ಕೆಲಸ?

ಸುಮನಾ-ವತ್ಸೇ, ಬಿಕನೀರರಸನಾದ ಸರ್ದಾರ್‌ಸಿಂಹನು ಇಲ್ಲಿಗೆ ಬರುವನು. ಆತನ ಅಪ್ಪಣೆಯಂತೆ ನಾವೆಲ್ಲರೂ ಇಲ್ಲಿ ವಾಸಮಾಡುತ್ತಿದೇವೆ. ರಾಜ್ಯದ ಕ್ಷೇಮವನ್ನುದ್ದೇಶಿಸಿ, ವಿದ್ಯಾಭ್ಯಾಸವು ವಿದ್ಯಾರ್ಥಿಗಳಿಗಾಗಿ ಏರ್ಪಡಿಸಲ್ಪಟ್ಟಿರುವುದು. ಅದೋ ಅಲ್ಲಿ ಕಾಣಿಸುವ ಬೆಟ್ಟದಲ್ಲಿ ಸೈನಿಕರು ತರಪೇತಾಗುತ್ತಲಿರುವರು. ದಕ್ಷಿಣ ಭಾಗದ ಬೆಟ್ಟದಲ್ಲಿ ಕಾಲಾಳುಗಳೂ, ಪೂರ್ವದಿಕ್ಕಿನ ಬೆಟ್ಟದಲ್ಲಿ ಭರತನಾಟ್ಯ-ಸಂಗೀತ

ವೈದ್ಯಶಾಸ್ತ್ರಗಳನ್ನಭ್ಯಾಸಮಾಡುವರೂ ವಾಸಮಾಡುತ್ತಿರುವರು. ಈ ಬೆಟ್ಟದಲ್ಲಿ ಯೋಗಶಾಸ್ತ್ರಾಭ್ಯಾಸಮಾಡಿಸಲು ನಿನ್ನ ತಂದೆಯು ವಾಸಮಾಡುತ್ತಿರುವನು. ಅರಸನು ಮೇಧಾವಿಯಾದದ್ದರಿಂದ ನವೀನ ವಿದ್ಯಾಪ್ರಚಾರದ ಮಾರ್ಗವನ್ನನುಸರಿಸಲು ಬೇಕಾದ ಅನುಕೂಲಗಳನ್ನು ಕಲ್ಪಿಸುತ್ತಿರುವನು. ನಾಳೆಯ ದಿನ ಎಲ್ಲವನ್ನೂ ನೀನೇ ಪ್ರತ್ಯಕ್ಷವಾಗಿ ನೋಡಿ ತಿಳಿದುಕೊಳ್ಳಬಹುದು.

ಅನಸೂಯ-ನನ್ನ ತಂದೆಯ ಸಮೀಪದಲ್ಲಿ ನಿಂತಿರುವಾಗ ಮೂರ್ಛಿತಳಾದೆನು. ಮಂದಮತಿಯು ಬಂದಾಗ ನನಗೆ ಸ್ಮರಣೆಯುಂಟಾಯಿತು. ಇತರ ವಿಷಯಗಳೊಂದನ್ನೂ ನಾನರಿಯೆನಾದುದರಿಂದ ಹಠಾತ್ತಾಗಿ ಅರಸನ ಎದುರಿಗೆ ಹೋಗಿ ನಿಲ್ಲುವುದು ಉಚಿತವಲ್ಲ. ಈ ರಮಣಿಯು ಯಾರೆಂದು ಕೇಳಿದರೆ ಅದಕ್ಕೆ ನೀವೇನು ಉತ್ತರಕೊಡುವಿರಿ? ನನ್ನ ವೃತ್ತಾಂತವೆಲ್ಲವನ್ನೂ ತಾವು ಸಾಂಗವಾಗರಿತಿರುವಿರಷ್ಟೆ?

ಸುಮನಾ-ಮಗೂ, ನೀನೇಕೆ ಹೆದರುವೆ ? ಪರಮೇಶ್ವರನ ಅನುಗ್ರಹದಿಂದ ದೊರೆತ ಪಂಕಜಾಕ್ಷಿಯೆಂದು ಹೇಳುವೆನು ಆತನು ಈ ರಾಜ್ಯದ ಅಧಿಕಾರಿಯಾದರೂ ನನಗೆ ಪುತ್ರಸಮಾನನು. ಯಾವಾಗ ಬಂದರೂ ನನ್ನನ್ನು ಕಂಡು ಮಾತನಾಡದೆ ಹೋಗುವ ಪದ್ಧತಿಯು ಆತನಲ್ಲಿಲ್ಲ. ನೀನು ಚಿಂತಿಸಬೇಡ.

ಅನಸೂಯ-ತಾಯಿ, ಆತನ ಕಣ್ಣಿಗೆ ಬೀಳದಂತೆ ನನ್ನನ್ನು ಮತ್ತೆಲ್ಲಿಗಾದರೂ ಕಳುಹಿಸು. ಅವನನ್ನು ನೋಡಲೆನಗೆ ಲಜ್ಜೆಯಾಗುತ್ತಿರುವುದು.

ಸುಮನಾ-ವತ್ಸೇ, ಲಜ್ಜೆಯೇಕೆ? ರಾಜಾಧಿರಾಜನ ಮಗಳು ನೀನು. ರಾಜಶಿಖಾಮಣಿಯಾದ ಬಿಕನೀರರಸನು ನಿನ್ನನ್ನು ವರಿಸಿದರೆ ಅದರಿಂದ ಕೀರ್ತಿಯು ಹೆಚ್ಚುವುದೇ ಹೊರ್ತು ತಗ್ಗುವುದಿಲ್ಲ ಮಗೂ, ನೀನೆಲ್ಲಿಯೂ ಹೋಗಕೂಡದು. ಈಶ್ವರಕೃಪೆಯಿಂದ ಆತನು ನಿನ್ನನ್ನು ಮೋಹಿಸಿ ವರಿಸಿದನಾದರೆ ನಮ್ಮೆಲ್ಲರಿಗೂ ಉಂಟಾಗುವ ಸಂತೋಷವಷ್ಟಿಷ್ಟಲ್ಲ ಏಕೆಂದರೆ-ಆತನಿಗಿನ್ನೂ ವಿವಾಹವಾಗಿಲ್ಲ. ಯಾವ ರಾಜಕುಮಾರಿಯೂ ಮನಸ್ಸಿಗೊಪ್ಪಲಿಲ್ಲವೆಂದೂ, ಬ್ರಹ್ಮಚರ್ಯದಲ್ಲಿರುವುದೇ ತನಗಾನಂದವೆಂದೂ ಹೇಳುತ್ತಿರುವನು.

ಅನಸೂಯ-ಜನನೀ, ನಾನು ರೂಪವತಿಯಲ್ಲ. ಮಹಾರಾಜನೆಂದೂ ನನ್ನಲ್ಲಿ ಇಚ್ಛೆಗೊಳ್ಳಲಾರನು. ಹೇಗಾದರೂ ಆತನ ಕಣ್ಣಿಗೆ ಬೀಳದಿರುವುದೇ ಒಳ್ಳೆಯದೆಂದು ತೋರುವುದು.

ಸುಮನಾ-ಮಗೂ, ಈ ಧರಿತ್ರಿಯಲ್ಲಿ ನಿನಗಿಂತಲೂ ಸುಂದರಳಾದ ರಮಣಿ ಇರುವಳೇ? ತಪೋವನದಲ್ಲಿರುವುದರಿಂದ ಸನ್ಯಾಸಿನಿಯಂತೆ ತೋರುವೆ. ನೀನು ಆಭರಣಾದಿಗಳಿಂದಲಂಕೃತಳಾದಲ್ಲಿ ಮತ್ತಿಷ್ಟು ಸುಂದರಳಾಗಿ ಕಾಣುವೆ. ಆಭರಣಗಳು ಶರೀರಸೌಂದರ್ಯಕ್ಕೆ ಸಹಾಯವಾಗಿರುವುವೆಂದು ಅನೇಕರು ಅಭಿಪ್ರಾಯಗೊಳ್ಳುವರು. ಅದು ಸುಳ್ಳೆಂದು ತೋರಿಸುವ ಭಾಗ್ಯವತಿಯಲ್ಲವೇ ನೀನು!

ಅನಸೂಯ-ತಾಯೇ, ಏನೋ ಹೇಳಿದೆ. ಇದರಮೇಲೆ ನಿಮ್ಮಿಷ್ಟ.

ಸುಮನಾ-ವತ್ಸೇ, ಬಾ. ನಿನ್ನ ಜನಕನು ಬರುವಷ್ಟರಲ್ಲಿ ಈಶ್ವರಪೂಜೆಯನ್ನು ಪೂರೈಸಿಕೊಂಡು ಬರೋಣ.

ಅನಸೂಯ-ಹೌದಮ್ಮಾ, ಹೊತ್ತಾಯಿತು. ಕರುಣಾಕರಮೂರ್ತಿಯನ್ನು ಧ್ಯಾನಿಸೋಣ.

'ಇದೋ ನಾನೂ ಬಂದೆ' ಎಂದು ಹೇಳುತ್ತಾ ಮಂದಮತಿಯು ಕೈಯಲ್ಲಿನ ಹೂವಿನ ಬುಟ್ಟಿಯ ಸಹಿತ ಇಬ್ಬರ ನಡುವೆ ನಿಂತನು! ರಮಣಿಯರಿಬ್ಬರೂ ನಗಲಾರಂಭಿಸಿದರು!



## ೧೭ನೆಯ ಅಧ್ಯಾಯವು

### ಸತಿಪತಿಯರು.



ಅಲ್ಲಿ ಮೂಢಮತಿಯಾದ ಮಾನಸಿಂಹ, ಇಲ್ಲಿ ಮಂದಮತಿ! ಎಲ್ಲಾ ಹಣೆಯ ಬರಹ. ಇವನನ್ನು ನೋಡಿದರೆ ಒಂದು ಕಡೆ ಪರಿತಾಪವೂ, ಮತ್ತೊಂದು ಕಡೆ ಕೋಪವೂ ಉಂಟಾಗುವುದು ಮೂಢರೊಡನೆ ಸಹವಾಸಮಾಡುವುದು ಅತಿ ಕಷ್ಟವು. ಬೆಳಗಿನಿಂದ ಈ ವನವನ್ನೆಲ್ಲ ಸುತ್ತುತ್ತಿದ್ದವನು ಮಹಾರಾಜನನ್ನು ಕರೆದುಕೊಂಡು ಬರುತ್ತಿರುವನಲ್ಲ. ಇವನನ್ನೀ ಕೆಲಸಮಾಡೆಂದು ಹೇಳಿದವರಾರು? ಮಹಾರಾಜನು ಪ್ರಶ್ನೆಮಾಡಿದ್ದರೆ ನಾನೇನುತ್ತರಕೊಡಲಿ? ನನ್ನನ್ನು ಆ ಮಹಾಪುರುಷನು ಗುರುತು ಹಿಡಿಯುವನೋ ಇಲ್ಲವೋ! ನಾನು ಮಹಾರಾಜನನ್ನು ಸರಸ್ವತೀ ಸದನದಲ್ಲಿ ಕಂಡ ವಿಷಯವನ್ನು ಸುಮನೆಗೆ ತಿಳಿಸಲಿಲ್ಲ; ಗುರುಮಹಾರಾಜನಿಗೂ ತಿಳಿಸಿಲ್ಲ. ಮಹಾರಾಜನು

ನನ್ನನ್ನು ನೋಡಿದರೆ ಏನು ಹೇಳುವನೋ ! ಅಸಹ್ಯತಳಾದವಳೆಂದು ನನ್ನನ್ನು ತಿರಸ್ಕರಿಸಿದರೆ ನನ್ನ ಪ್ರಾಣವು ನಿಲ್ಲುವುದೇ! ನಾನು ಉತ್ತಮಳೆನ್ನುವುದನ್ನು ಜಗದೀಶ್ವರನೊಬ್ಬನು ಮಾತ್ರ ಅರಿತಿರುವನಲ್ಲದೆ, ಇತರರು ಅರಿಯಲು ಕಾರಣವಿಲ್ಲ. ಇಂತಹ ಅವಸ್ಥೆಯಲ್ಲಿ ಮಹಾರಾಜನನ್ನು ನೋಡುವುದು ಉಚಿತವಲ್ಲ ನನ್ನ ಸ್ಥಿತಿಯು ಬಹಳ ಹೀನವಾದುದು. ಜನಕನಿಂದ ನಿರಾಕರಿಸಲ್ಪಟ್ಟವಳು, ಮಾತೃಪ್ರೇಮದಿಂದ ವಂಚಿಸಲ್ಪಟ್ಟವಳು, ನಿರ್ಭಾಗ್ಯಳು. ಒಂದು ವೇಳೆ ಮಹಾರಾಜನು ನನ್ನನ್ನು ಕಂಡು ಪೂರ್ವ ವೃತ್ತಾಂತವನ್ನು ಕೇಳಿದರೂ ನಾನು ಸುಖಲತೆಯೇ ಅಲ್ಲವೆಂದು ಸಾಧಿಸುತ್ತೇನೆ ನಿಜವಾದ ಪ್ರೇಮವು ನನ್ನಲ್ಲಾತನಿಗಿರುವುದು ನಿಶ್ಚಯವಾದರೆ ಸತ್ಯದೇವತೆಯು ಈ ಚರ್ಚೆಯನ್ನು ನಿಲ್ಲಿಸಿ ಸುಖವುಂಟುಮಾಡಲಿ. ಇದೋ! ಮಹಾರಾಜನು ಇತ್ತಕಡೆ ಬರುತ್ತಿರುವನು''ಎಂದು ತನ್ನಲ್ಲಿ ತಾನೇ ಹೇಳಿಕೊಳ್ಳುತ್ತಾ ಅನಸೂಯೆಯು ಅಲ್ಲಿದ್ದುದೊಂದು ಗಿಡದ ಮರೆಯಲ್ಲಿ ನಿಂತುಕೊಂಡಳು.

'ಮಂದಮತೀ, ನಿನ್ನ ದೇವಿಯೆಲ್ಲಿ ? ಅರಣ್ಯಗುಹೆಯಲ್ಲಿ ಭಾರತಿಯು ಪ್ರತ್ಯಕ್ಷಳಾದಳೆಂದೂ, ವಿದ್ಯಾಭ್ಯಾಸವನ್ನೆಲ್ಲ ಪೂರ್ತಿಯಾಗಿ ಕಲಿತಿರುವುದಾಗಿಯೂ ಹೇಳಿದೆಯಲ್ಲ ನಿನ್ನನ್ನು ಪರೀಕ್ಷೆಮಾಡುವುದಕ್ಕಿಂತ ಆ ನಿನ್ನ ದೇವಿಯನ್ನೇ ಪರೀಕ್ಷೆಮಾಡಿದರ ಹೆಚ್ಚು ವಿಷಯಗಳು ತಿಳಿಯುವುದೆಂದು ಗುರುಪತ್ನಿಯು ಹೇಳಿದಳಲ್ಲವೇ? ಎಲ್ಲಿ ಅವಳಿರುವ ಸ್ಥಳವನ್ನು ತೋರಿಸು' ಎಂದು ಹೇಳುತ್ತಾ ಸರ್ದಾರ್‌ಸಿಂಹನು ಅನಸೂಯೆಯು ಮರೆಯಾಗಿದ್ದ ಗಿಡದ ಸಮೀಪಕ್ಕೆ ಬಂದನು ಅವನಿಗುಂಟಾದ ಆಶ್ಚರ್ಯವು ಅಷ್ಟಿಷ್ಟಲ್ಲ. ಹೃದಯದಲ್ಲಿ ಒಂದು ಬಗೆಯಾದ ಸಂಕಟವುಂಟಾದಂತೆ ತೋರಿತು. ನಾನಾವಿಧವಾದ ಸಂಶಯವುಂಟಾಗಲು ಸ್ತಂಭಿತನಾಗಿ ನಿಂತನು

ಅನಸೂಯೆಯು ಬಾಯಿಬಿಡದೆ ಅರಸನನ್ನು ದೃಷ್ಟಿಸಿ ನೋಡುತ್ತಾ ಹೋಗುತ್ತಿರಲು, ಮಂದಮತಿಯು ಓಡಿಬಂದು ಅವಳ ಮಾರ್ಗಕ್ಕಡ್ಡಲಾಗಿ ನಿಂತು-'ದೇವೀ, ಮಹಾರಾಜನು ನನ್ನನ್ನುಕೊಂದೇಬಿಡುವನು ನನ್ನನ್ನು ರಕ್ಷಿಸುತ್ತೇನೆಂದು ಆಹೊತ್ತೆ ಹೇಳಿದೆ. ನನಗೆ ಪ್ರತಿಯಾಗಿ ಮಹಾರಾಜನ ಬಳಿ ನೀನು ಪಾರವನ್ನೊಪ್ಪಿಸು. ಇಲ್ಲದಿದ್ದರೆ ನಾನು ಸಾಯುವುದು ನಿಶ್ಚಯ' ಎಂದು ಪ್ರಲಾಪಿಸಿದನು.

'ಮೂಢಾ, ಬಾಯಿಮುಚ್ಚು. ದೂರಹೋಗು ನಿನ್ನನ್ನು ಯಾರೂ ಕೊಲ್ಲಲಾರರು. ದಾರಿಬಿಡು. ನಾನು ಗುರುಪತ್ನಿಯ ಬಳಿ ಹೋಗುವೆನು 'ಎಂದು ಹೇಳಿ ಹೊರಟಳು, ರಾಜಕುಮಾರನೂ ಅವಳನ್ನು ಹಿಂಬಾಲಿಸಿದನು. ಇದನ್ನರಿತ ರಮಣಿಯು

ಮತ್ತಿಷ್ಟು ವೇಗವಾಗಿ ನಡೆದಳು ಮಹಾರಾಜನು ಇನ್ನೂ ಜಾಗ್ರತೆಯಾಗಿ ನಡೆದನು. ಇವರಿಬ್ಬರನ್ನೂ ಮಂದಮತಿಯು ಹೋಗದಂತೆ ತಡೆಯುತ್ತಾ 'ಅಯ್ಯೋ ನನ್ನ ಪಾರಹೋಯಿತಲ್ಲಾ, ಇನ್ನೇನುಮಾಡಲಿ? ಹೇಳುವರು ಕೇಳುವರು ಯಾರೂ ಇಲ್ಲವೇ? ದೇವೀ, ನಿನ್ನನ್ನು ನಂಬಿದ್ದಕ್ಕೆ ಇದೇ ಫಲವೋ? ನನ್ನನ್ನು ಕೈ ಬಿಡುವುದು ನಿನಗೆ ಧರ್ಮವೇ ? ಮಹಾರಾಜನು ಕೇಳತಕ್ಕ ಪ್ರಶ್ನೆಗಳಿಗೆ ಉತ್ತರಕೊಟ್ಟರ ಸರಿಹೋಯ್ತು, ಇಲ್ಲದಿದ್ದರೆ ಈ ಬಂಡೆಗೆ ನನ್ನ ತಲೆ ಚಚ್ಚಿಕೊಳ್ಳುತ್ತೇನೆ' ಎಂದು ಅಳುವುದನ್ನು ಕಂಡ ಮಹಾರಾಜನೂ, ಅನಸೂಯೆಯೂ ಹೊಟ್ಟೆ ಹುಣ್ಣಾಗುವಂತೆ ನಗಲಾರಂಭಿಸಿದರು.

ಮಂದಮತಿಯು ಪುನಃ ಅವರ ಸಮೀಪಕ್ಕೆ ಬಂದು—ಮಹಾರಾಜ, ಯಾವ ಶಾಸ್ತ್ರದಲ್ಲಾದರೂಪ್ರಶ್ನೆಮಾಡಿ, ದೇವೀ, ನೀನು ಉತ್ತರಕೊಡು ನೀನು ನನ್ನ ಕುಲದೇವರಲ್ಲವೇ ?

ಇದೇ ಸಮಯವೆಂದರಿತು ಸರ್ದಾರ್‌ಸಿಂಹನು ಮಾತನಾಡತೊಡಗಿದನು:—

ಸರ್ದಾರ್‌ಸಿಂಹ-ಸ್ತ್ರೀರತ್ನವೇ, ಭಾರತರಮಣಿಯರ ಮುಖ್ಯಧರ್ಮವೇನು ?

ಅನಸೂಯ—ಪತಿಯನ್ನಿಷ್ಟದೈವದಂತ ಭಾವಿಸಿ, ತ್ರಿಕರಣಶುದ್ಧಿಯಿಂದ ಪೂಜಿಸಿ ಸೇವೆ ಮಾಡುವುದು.

ಸರ್ದಾರ್‌ಸಿಂಹ-ಅಂಗನಾಮಣಿಯೇ, ಆರ್ಯರಮಣಿಯರು ಪ್ರಾಚೀನಕಾಲದಲ್ಲಿ ನಡೆದುಕೊಳ್ಳುತ್ತಿದ್ದ ವಿಧಾನವನ್ನು ಸ್ವಲ್ಪ ತಿಳಿಸುವೆಯಾ ?

ಅನಸೂಯ--ಶಾಂತಿ, ಧರ್ಮ, ಸ್ವಾರ್ಥತ್ಯಾಗ, ಕಷ್ಟಸಹಿಷ್ಣುತೆ, ಪತಿಸೇವೆ, ಅತ್ತೆಮಾವಂದಿರಸೇವೆ, ದೇವಬ್ರಾಹ್ಮಣಪೂಜೆ, ಅತಿಥಿ ಅಭ್ಯಾಗತರ ಸತ್ಕಾರ, ಅನಾಥರಕ್ಷಣೆ ಇತ್ಯಾದಿ ಕರ್ಮಗಳನ್ನು ಮುಖ್ಯವಾಗಿ ಮಾಡುತ್ತಿದ್ದರು

ಸರ್ದಾರ್‌ಸಿಂಹ—ರಮಣೀ, ಪತ್ನೀ ಧರ್ಮವನ್ನು ವಿವರಿಸು.

ಅನಸೂಯ –ದರಿದ್ರರಾಗಿ ವನದಲ್ಲಿ ಪರ್ಣಶಾಲೆಯಲ್ಲಿ ಪತಿಯೊಡನೆ ವಾಸಮಾಡಿದರೂ, ಕಂದಮೂಲಗಳನ್ನುಂಡರೂ, ಕಷ್ಟಪಟ್ಟರೂ ಅದೇ ಸ್ವರ್ಗಸುಖವೆಂದು ಭಾವಿಸುವುದು ಅವಳ ಪ್ರಥಮಧರ್ಮವು ರಮ್ಯವಾದ ಮಂದಿರದಲ್ಲಿ ಸುಂದರವಾದ ನಂದನವನದ ಮಂದಮಾರುತವು ಬೀಸಲು ರಾಜಭೋಜನವುಂಡು ಪತಿಹೀನೆಯಾಗಿ ಕಾಲಕಳೆಯುವದಕ್ಕಿಂತ ಮೇಲೆ ಹೇಳಿದಂತೆ ಕಷ್ಟಪಡಲು ನಮ್ಮ ಭಾರತರಮಣಿಯ

ರು ಸಂತೋಷದಿಂದೊಪ್ಪುವರು  ಪ್ರಿಯಮಧುರ ಆನಂದಕರವಾದ ಸಂಭಾಷಣೆಗಳಿಂದ ಪತಿಯ ಮನಕ್ಕಾನಂದವುಂಟುಮಾಡುತ್ತಾ ಆತನ ಕಷ್ಟ ಸುಖಗಳನ್ನು ತನ್ನವೆಂದು ಭಾವಿಸಿ ನಡೆಯುವುದು ಆರ್ಯರಮಣಿಯರಿಗೆ ಹೊಸದಲ್ಲ ಪತಿಯ ಕೋಪವು ವಜ್ರಘಾತದಂತೆಯೂ, ತಿರಸ್ಕಾರವು ಅಗ್ನಿಯಂತೆಯೂ, ಆತನ ಪ್ರಸನ್ನವದನವು ಚಂದ್ರಬಿಂಬದಂತೆ ಯಾವಳಿಗೆ ತೋರುವವೋ ಅವಳೇ ಅಂಗನೆಯರಲ್ಲಿ ಶ್ರೇಷ್ಠಳು. ಮನಶ್ಶುದ್ಧಿಯಿಂದ ಪ್ರೇಮರಸಭರಿತವಾದ ಮುಖದಿಂದ ಸುಖಾಸುಖಗಳಲ್ಲಿ ಪತಿಸೇವೆಮಾಡುವುದು ಹಿಂದೂ ರಮಣಿಯ ಧರ್ಮವು ಇಂತಹ ಧರ್ಮವು ಪವಿತ್ರ ಭಾರತವರ್ಷದಲ್ಲಿ ಎಲ್ಲೆಲ್ಲಿಯೂ ಈಗಲೂ ನೆಲೆಗೊಂಡಿರುವುದು

ಸರ್ದಾರ್ ಸಿಂಹ—ಮಾನಿನೀಮಣಿ, ಪರೋಪದೇಶದಲ್ಲಿ ಪಾಂಡಿತ್ಯವುಳ್ಳವಳೂ, ತನ್ನ ವಿಷಯದಲ್ಲಿ ಮನಸ್ವಿನಿಯೂ ಆದ ಅಂಗನೆಯನ್ನು ಏನುಮಾಡುವುದು?

ಅನಸೂಯೆ—ಕಷ್ಟಸುಖಗಳಲ್ಲಿ ಭಾಗಿಯಾಗಿರುತ್ತೇನೆಂದು ಸತ್ಯಮಾಡಿಕೊಟ್ಟ ಪತಿಯನ್ನು ಯಾವ ರಮಣಿಯು ಉಲ್ಲಂಘಿಸುವಳೋ, ಅವಳು ಮಹಾ ಪಾತಕಿಯು. ಸುಖದಲ್ಲಿಮಾತ್ರ ಅವನನ್ನು ಪ್ರೀತಿಸಿ, ಕಷ್ಟವೊದಗಿದ ಕಾಲದಲ್ಲವನನ್ನು ಸತ್ಕರಿಸದೆ ಉದಾಸೀನಮಾಡತಕ್ಕ ರಮಣಿಯೂ ಇರುವಳೇ? ಹೀಗಿರತಕ್ಕವರಿಗೆ ರೌರವಾದಿ ನರಕವೇ ಪ್ರಾಪ್ತವಲ್ಲದೆ ಬೇರಿಲ್ಲ

ಸರ್ದಾರ್ ಸಿಂಹ-ನೀನು ಹೇಳಿದ ವಿಷಯಗಳೆಲ್ಲವೂ ನಿಜವೆಂದು ನಂಬಬಹುದೋ?

ಅನಸೂಯೆ--ರಾಜೇಂದ್ರನ ಸಮ್ಮುಖದಲ್ಲಿ ಅಬಲೆಯೊಬ್ಬಳು ಸುಳ್ಳು ಹೇಳಿ ಜೀವಿಸುವಳೇ? ನಾನು ಹೇಳಿದುದೆಲ್ಲವೂ ನಿಶ್ಚಯವೆನ್ನುವುದರಲ್ಲಿ ಸಂಶಯವಿಲ್ಲ.

ಸರ್ದಾರ್ ಸಿಂಹ—ಹಾಗಾದರ ಆ ವಿಷಯವನ್ನು ಅದೇಕೆ ಅನುಷ್ಠಾನಕ್ಕೆ ತರಲಿಲ್ಲ ?

ಅನಸೂಯೆ-ಇಂತಹ ಕಾರ್ಯಗಳನ್ನು ರಮಣಿಯರು ತಾವೇ ಮೊಟ್ಟಮೊದಲು ಅನುಷ್ಠಾನಕ್ಕೆ ತರಲಾರರು—ಹೀಗೆ ಹೇಳಿ ಬಾಯಿ ಮುಚ್ಚುವಷ್ಟರಲ್ಲಿಯೇ ಸರ್ದಾರ್ ಸಿಂಹನ ಕರಗಳು ಅನಸೂಯೆಯ ಕಂಠವನ್ನಾಲಿಂಗಿಸಿದವು. ವದನವು ಅವಳ ವದನವನ್ನು ಸ್ಪರ್ಶಿಸಿತು ಈ ಆಶ್ಚರ್ಯವನ್ನು ಕಂಡ ಮಂದಮತಿಯು ‘ ಅಯ್ಯೋ ! ಯಾರೂ ಇಲ್ಲವೇ? ನನ್ನ ದೇವಿಯನ್ನು ಮಹಾರಾಜನು ಕೈಗಳಿಂದ ಹಿಡಿದು ಹಿಂಸೆ ಮಾಡುವನಲ್ಲ'' ಎಂದು ಪ್ರಲಾಪಿಸುತ್ತಾ ಓಡಿಹೋದನು ಚಿರಕಾಲದಿಂದ ಅಗಲಿದ

ನೂತನ ಕಾದಲರು ಮತ್ತೆ ಒಬ್ಬರನ್ನೊಬ್ಬರು ಹೊಂದಿ ಪ್ರೇಮಾಂಕಿತವರಾದರು. ಸರ್ದಾರ್‌ಸಿಂಹ ಮತ್ತು ಸುಖಲತೆಯ ಸಮ್ಮೇಳನವು ವನದೇವತೆಯ ಸಮ್ಮುಖದಲ್ಲಿ ಅವರನ್ನು ಸತಿಪತಿಯರನ್ನಾಗಿಸಿತು



## ೧೮ನೆಯ ಅಧ್ಯಾಯವು

### ಉಲ್ಲಾಸ ವಿನೋದ ಸಂಭಾಷಣೆ.



ಧರ್ಮಪ್ರಿಯೇ, ತರುಣೀಮಣಿ, ನನ್ನನ್ನು ದುಃಖಕ್ಕೀಡುಮಾಡಿ ನೀನೆಲ್ಲಿ ಹೋಗಿದ್ದೆ ? ನಿನ್ನನ್ನು ಈ ಜನ್ಮದಲ್ಲಿ ಪುನಃ ಕಾಣುವೆನೆಂದು ನಾನು ಕನಸಿನಲ್ಲಿಯೂ ನೆನಸಿರಲಿಲ್ಲ ನೀನಿಲ್ಲಿಗೆ ಹೇಗೆ ಬಂದೆ ? ಸುಂದರೀ, ನನಗಾಗಿ ನೀನೆಷ್ಟು ಕಷ್ಟಪಟ್ಟೆ ?-ಎಂದು ಸರ್ದಾರ್‌ಸಿಂಹನು ಪ್ರೇಮದಿಂದ ಕೇಳಿದನು.

'ಮನೋರಮಣಾ, ಪ್ರಾಣನಾಥಾ, ಸರಸ್ವತೀ ಸದನದಿಂದ ಸುರಂಗಮಾರ್ಗವಾಗಿ ಹೊರಗೆ ಬಂದವರೆಗೂ ನೆನಪಿದೆ ನನಗೆ ಪುನಃ ಜ್ಞಾನೋದಯವಾದಾಗ ಮತ್ತೊಂದು ಗುಹೆಯಲ್ಲಿದ್ದೆನು ನನ್ನ ತಂದೆಯು ಮಾಡಿದ ಕೃತ್ರಿಮವೆಂದು ದುಃಖಿಸುತ್ತಿರುವಾಗ ಮಂದಮತಿಯು ಸಹಾಯವಾದನು. ಅಂದಿನಿಂದ ಸುಮನಾದೇವಿಯೂ, ಗುರುಮಹಾರಾಜರೂ ನನ್ನ ತಾಯಿತಂದೆಗಳಾದರು' ಎಂದಳು.

ಸರ್ದಾರ್‌ಸಿಂಹ--ಪ್ರಿಯೇ, ಅವರೆಲ್ಲರೂ ನೆಂಟರಾದರೆಂದು ಹೇಳಿದೆಯಲ್ಲ, ನಾನು ಮಾತ್ರ ನಿನಗೆ ಸಂಬಂಧವಾಗಲಿಲ್ಲವೇ ? ಅದನ್ನು ಮಾತ್ರ ಏಕೆ ಹೇಳಲಿಲ್ಲ ? ನೀನು ನಿಜವೃತ್ತಾಂತವನ್ನು ಅವರಿಗೆ ತಿಳಿಸಿದ್ದರೆ ಅವರೇ ನಿನ್ನನ್ನು ನನ್ನ ಬಳಿಗೆ ಮರ್ಯಾದೆಯಿಂದ ಕಳುಹಿಸಿಕೊಡುತಿದ್ದರು. ತೊಂದರೆಗಳಿಗೆ ಅವಕಾಶವೇ ಇರುತ್ತಿರಲಿಲ್ಲ.

ಸುಖಲತಾ--ಪ್ರಾಣವಲ್ಲಭ, ನಾವಿಬ್ಬರೂ ಸ್ವಲ್ಪಹೊತ್ತು ಮಾತನಾಡಿದೆವು. ಪದ್ಮಲತೆ, ಮಾನಸಿಂಹ, ಪ್ರತಾಪಸಿಂಹಾದಿಗಳು ನಮ್ಮ ಸಮೀಪದಲ್ಲಿದ್ದವರು ಅಗಲಲಿಲ್ಲ ಅವರೆಲ್ಲರೆದುರಿನಲ್ಲಿಯೂ ನಮ್ಮಂತರಂಗ ವಿಷಯಗಳನ್ನು ಬಹಿರಂಗಪಡಿಸಲು ಅವಕಾಶವಾಗಲಿಲ್ಲ. ನಮ್ಮ ಇಂದ್ರಿಯಗಳ ಸಂಕೇತದಿಂದ ಸತಿಪತಿಯರೆಂದು ತೀರ್ಮಾನಿಸಿದರೇ ಹೊರ್ತು ವಾಕ್ಕಿನಿಂದ ನಿಶ್ಚಯಮಾಡಲಿಲ್ಲ. ಪ್ರಾಣಪತೀ,

ಮರುಕ್ಷಣದಲ್ಲಿಯೇ ಭಯಂಕರ ವಾರ್ತೆಗಳನ್ನು ಕೇಳಿದ ನಾವುಗಳು ಜೀವ ಶವಗಳಾದೆವು ನೀವೊಂದು ದಾರಿ, ನಾನೊಂದು ದಾರಿಯಾಗಿ ಅಗಲಿದೆವು. ಈ ಲಜ್ಜಾಹೀನತ್ವವನ್ನು ನಮ್ಮನ್ನಾದರಿಸಿದ ವಿಪ್ರಶ್ರೇಷ್ಠರಿಗೆ ಹೇಳಬೇಕಾಗಿತ್ತೇ? ನನ್ನ ವೃತ್ತಾಂತವನ್ನು ಕೇಳಿದಾಗ ಕೆಲವು ಗುಪ್ತ ವಿಷಯಗಳು ಹೊರ್ತು ಉಳಿದೆಲ್ಲ ವಿಷಯಗಳನ್ನೂ ಹೇಳಿದ್ದಕ್ಕೆ ಅವರು ತೃಪ್ತಿಹೊಂದಿ ನನ್ನನ್ನಾದರಿಸಿದರು.

ಸರ್ದಾರ್‌ಸಿಂಹ--ಸತೀತಿಲಕವೇ, ನಿನ್ನ ತಂದೆಯ ಬಳಿ ನೀನಿದ್ದಾಗ ನಿನ್ನನ್ನೆತ್ತಿಕೊಂಡು ಹೋದವರು ಇಂಥವರೆಂಬುದು ನಿನಗೆ ಗೊತ್ತಿಲ್ಲವೇ? ನಿಧಾನವಾಗಿ ಯೋಚಿಸಿ ಹೇಳು.

ಸುಖಲತೆ--ಪ್ರಭು, ನನ್ನ ತಂದೆಯು ನನ್ನನ್ನು ಚಿಕ್ಕಪ್ಪನ ಬಳಿ ಕಳುಹಿಸುತ್ತೇನೆಂದು ಹೇಳಿದವರಿಗೂ ಜ್ಞಾಪಕದಲ್ಲಿರುವುದು ಆದರಮೇಲೆ ನಡೆದ ವಿಷಯಗಳೊಂದೂ ನನಗೆ ತಿಳಿಯದು ಆದರೆ ನನ್ನಲ್ಲಿದ್ದ ಆಭರಣಗಳನ್ನೆಲ್ಲಾ ತೆಗೆದುಕೊಂಡು ಯಾರೋ ನನ್ನನ್ನು ಅಂಧಕಾರ ಗುಹೆಯಲ್ಲಿ ತಳ್ಳಿದ್ದು ಸ್ವಪ್ನದಲ್ಲಿ ಕಂಡಂತೆ ಸ್ವಲ್ಪಸ್ವಲ್ಪ ಜ್ಞಾಪಕವಿದೆ

ಸರ್ದಾರ್‌ಸಿಂಹ--ಪ್ರೇಮರಮಣಿ, ನಿನ್ನನ್ನು ಹೊತ್ತುಕೊಂಡು ಹೋದವನು ನಾನು, ನನ್ನ ತಂದೆಯು ಯೋಗಾಭ್ಯಾಸಮಾಡುತ್ತಿದ್ದ ವನಮಂದಿರದಲ್ಲಿ ನಿನ್ನನ್ನು ಮಲಗಿಸಿದ್ದೆನು ಔಷಧಿ ಮೂಲಿಕೆ ಮೊದಲಾದವುಗಳಿಂದ ಕಟ್ಟಲ್ಪಟ್ಟ ಚಿಕ್ಕ ಕೊರಡಿಯಲ್ಲಿ ನೀನು ಮಲಗಿದ್ದಾಗ ಪದ್ಮಲತೆಯು ನಿನ್ನ ಸಮೀಪದಲ್ಲಿದ್ದಳು. ನೆಲಮಾಳಿಗೆಯಿಂದ ಯಾರೋ ಒಬ್ಬರು ಮೇಲೆ ಬಂದರೆಂದೂ, ನಿನ್ನನ್ನು ಅವರುಗಳೇ ಅಪಹರಿಸಿರಬೇಕೆಂದೂ ಅವಳಿಗೆ ಸ್ಮೃತಿ ಬಂದನಂತರ ಹೇಳಿದಳು ಪ್ರಿಯೇ, ಅಂದಿನಿಂದ ನಿನ್ನನ್ನು ಕಾಣದ್ದರಿಂದ ಚಿಂತಾಕ್ರಾಂತನಾಗಿ, ವೇದಾಂತ ವಿಚಾರಗಳಲ್ಲಾಸಕ್ತನಾಗಿ ಅಲೆಯುತ್ತಿರುವೆನು. ಪ್ರತಾಪನ ಪ್ರಾರ್ಥನೆಯನ್ನಂಗೀಕರಿಸಿ ದೇಶಾಂತರ ಹೋಗದಿದ್ದೇನೆ. ನಿನ್ನನ್ನು ಕಂಡ ಆನಂದವನ್ನು ನಾನು ಎಷ್ಟೆಂದು ಹೇಳಲಿ!

ರಾಜಕುಮಾರನೂ, ರಾಜಪುತ್ರಿಯೂ ಮೇಲೆ ಹೇಳಿದಂತೆ ಪ್ರೇಮಸಂಭಾಷಣೆಗೈಯುತ್ತಿರಲು ಮಂದಮತಿಯು ಗುರುಮಹಾರಾಜ ಸುಮನಾ ಇಬ್ಬರನ್ನೂ ಕರೆದುಕೊಂಡು ತೋಟದೊಳಕ್ಕೆ ಬಂದನು. ಸತಿಪತಿಯರಿಬ್ಬರೂ ಎದ್ದು ನಿಂತು ಗುರುದಂಪತಿಗಳಿಗೆ ಭಕ್ತಿಯಿಂದ ನಮಸ್ಕರಿಸಲು, ಸುಮನೆಯು ಸುಖಲತೆಯ ಸಮೀಪಕ್ಕೆ ಬಂದು--'ಅನಸೂಯಾ, ನಾನು ಆ ದಿನ ಹೇಳಿದಾಗ ನೀನು ತಿರಸ್ಕರಿಸಿದೆಯಲ್ಲವೇ?

ರಾಜಪುತ್ರನು ನಿನ್ನನ್ನು ಕಂಡರೆ ಎಂದಿಗೂ ಬಿಡುವುದಿಲ್ಲವೆಂದು ಹೇಳಿದ್ದು ಸುಳ್ಳಾಯಿತೇ? ರಾಜಮಹಿಷಿಯಾಗಿ ಪುತ್ರರನ್ನು ಪಡೆದು ಧರ್ಮಪರಿಪಾಲನೆಮಾಡು' ಎಂದು ವಾತ್ಸಲ್ಯದಿಂದ ಹರಸಿದಳು.

'ಮಗೂ, ನಿನ್ನ ರೂಪ, ಗುಣ, ಸಾಮರ್ಥ್ಯಾದಿಗಳಿಗೆ ತಕ್ಕಂತ ಪತಿಯನ್ನು ಭಗವಂತನು ನಿನಗಿತ್ತಿರುವನು. ನೀನು ಮಂಡಲಾಧಿಪತಿಯ ಸಹಚರಿಯಾಗಿ ಸಕಲ ಸೌಭಾಗ್ಯಗಳಿಂದಲೂ ಕೂಡಿ ಬಾಳುವಳಾಗು ಜನರು ನಿನ್ನನ್ನು ಉತ್ತಮಳೆಂದು ಹೊಗಳುವಂತೆ ಆರ್ಯ ಧರ್ಮವನ್ನನುಸರಿಸಿ ನಡೆಯುವಳಾಗು. ಸರ್ವೇಶ್ವರನು ನಿನಗೆ ಸಕಲ ಮಂಗಳಗಳನ್ನೂ ಉಂಟುಮಾಡಲಿ' ಎಂದು ಗುರುಮಹಾರಾಜನು ಆಶೀರ್ವಾದ ಮಾಡಿದನು.

'ಅವಳು ನನ್ನ ಆರಾಧ್ಯದೇವತೆಯಲ್ಲವೇ? ಅವಳನ್ನು ಅರಸನೊಡನೆ ನಾನೆಂದೂ ಕಳುಹಿಸಲಾರನು ಅವಳಿಗಾಗಿ ನಾನೆಷ್ಟು ಕಷ್ಟಪಟ್ಟೆ! ಆದುದರಿಂದ ಈ ರಮಣಿಯನ್ನೆಲ್ಲಿಗೂ ಕಳುಹಿಸಕೂಡದು' ಎಂದು ಮಂದಮತಿಯು ಪ್ರಾರ್ಥಿಸಿದನು.

ಮೂಢನ ವಾಕ್ಯಗಳನ್ನು ಕೇಳಿದ ಸರ್ವರೂ ನಗಲಾರಂಭಿಸಿದರು. ಸರ್ದಾರ್ ಸಿಂಹನು ಗುರುಮಹಾರಾಜನನ್ನು ನೋಡಿ—'ಮಹಾತ್ಮಾ, ಒಂದೇ ಒಂದು ಸಂಶಯವಿರುವುದು ನನ್ನ ತಂದೆಯಿಂದ ಕಟ್ಟಲ್ಪಟ್ಟ ವನಮಂದಿರದ ನೆಲಮಾಳಿಗೆಗೂ, ರಾಜಕುಮಾರಿಯು ತನಗೆ ದೊರತ ಗುಹೆಗೂ ಮಾರ್ಗವಿರುವುದೇ? ತಾವು ನನ್ನ ಜನಕನ ಪ್ರಿಯಮಿತ್ರರಲ್ಲವೇ? ಈ ವಿಷಯವನ್ನು ತಿಳಿಸಿ' ಎನಲು, ಗುರುವರ್ಯನು 'ಮಹಾರಾಜ, ನಿನ್ನ ಜನಕನಿಗೆ ಜ್ಞಾನೋಪದೇಶಮಾಡಿದ ನನ್ನ ಸೋದರನು ಪ್ರಪಂಚವ್ಯವಹಾರವನ್ನು ಬಿಟ್ಟು ವನವನಾಂತರಗಳಲ್ಲಿದ್ದುಕೊಂಡು ಪರಬ್ರಹ್ಮ ಧ್ಯಾನದಲ್ಲಿ ಮಗ್ನನಾಗಿರುವನು. ಯಾವಾಗಲಾದರೂ ಧ್ಯಾನವನ್ನು ಬಿಟ್ಟಿದ್ದಾಗ ನಿನ್ನ ತಂದೆಯಿಂದ ನಿರ್ಮಿಸಲ್ಪಟ್ಟಿರುವ ವನಮಂದಿರಕ್ಕೆ ಬಂದು ಹೋಗುವ ಪದ್ಧತಿಯುಂಟು. ಬಹಳ ದಿನಗಳಿಂದ ಅದರಲ್ಲಿ ಮನುಷ್ಯ ಸಂಚಾರವೇ ಇಲ್ಲ. ಏಕಾಂತವಾಸಕ್ಕನುಕೂಲವಾದ ಸ್ಥಳವೆಂದು ತಿಳಿದು ಕೆಲವು ದಿನ ಅಲ್ಲಿಯೇ ವಾಸಮಾಡತೊಡಗಿದನು. ಆ ಕೊರಡಿಯಲ್ಲಿ ಮಲಗಿದ್ದ ರೋಗಿಯು ಸಂಕಟಪಡುವುದನ್ನು ಕಂಡು ಜೀವಕಾರುಣ್ಯದಿಂದಲೂ, ಅವಳು ತಕ್ಕ ಚಿಕಿತ್ಸೆಮಾಡಿದಲ್ಲಿ ಜೀವಿಸುವಳೆನ್ನುವ ನಂಬುಗೆಯಿಂದಲೂ ಅವಳನ್ನಿಲ್ಲಿಗೆ ಕರೆದುತಂದನು. ಆ ರೋಗವು ಒಂದು ವಿಧವಾದ ಸನ್ನಿಯಾದುದರಿಂದ ಸಾಧಾರಣ ಮೂಲಿಕೆಗಳಿಂದ ಗುಣವಾಗದೆಂದರಿತು ನೂತನ ಮೂಲಿಕೆಯೊಂ

ದನ್ನು ತರುವ ಉದ್ದೇಶದಿಂದ ಹೊರಟುಹೋದ ಸಮಯದಲ್ಲಿ ಅಂಗನೆಯು ಚೀತರಿಸಿಕೊಂಡಳು. ಮಂದಮತಿಯ ಸಹಾಯವು ಸಕಾಲಕ್ಕೆ ದೊರೆತದ್ದರಿಂದ ಕುಮಾರಿಯು ಅವನ ಸಹಾಯದಿಂದ ನನ್ನ ಬಳಿಗೆ ಬಂದಳು. ಅಂದಿನಿಂದ ಇವಳಿಗೆ 'ಅನಸೂಯೆ' ಎಂಬ ಹೆಸರಿಟ್ಟು ಪಾಲಿಸುತ್ತ ಬಂದೆವು ರಾಜಕುಮಾರಿಯು ಅಜ್ಮೀರರಸನ ರಾಜಭವನದಲ್ಲಿದ್ದ ವಿಷಯವು ನಮ್ಮಣ್ಣನಿಂದ ನನಗೆ ತಿಳಿಯಿತು ನಮ್ಮಣ್ಣನು ವಿರಕ್ತಪುರುಷನಾದುದರಿಂದ ಕುಮಾರಿಯು ಸೌಖ್ಯವಾಗಿ ನನ್ನ ಬಳಿ ಇರುವುದನ್ನರಿತು ನಿರ್ವಿಚಾರವಾಗಿ ದೇಶಸಂಚಾರಕ್ಕಾಗಿ ಹೊರಟುಹೋದನು ಸರ್ದಾರ್‌ಸಿಂಹಾ, ರಮಣಿಯು ಕಪಟರಹಿತಳಾದ ಕಲಾವತಿಯು, ನನ್ನ ಶಿಷ್ಯರು ಅನೇಕ ವರ್ಷಗಳಿಂದ ಕಲಿತವಾರಗಳನ್ನು ನಿಮಿಷಮಾತ್ರದಲ್ಲಿ ಕಲಿತಳು ಭಗವಂತನ ಅಪಾರಕರುಣಾವಿಶೇಷದಿಂದ ನಿನ್ನ ಪಾಣಿಗ್ರಹಣ ಮಾಡಿದಳು' ಎಂದನು.

ಮಹಾರಾಜನ ಆನಂದಕ್ಕಳವಿಲ್ಲ. ರಾಜಕುಮಾರಿಯನ್ನು ಕಂಡದ್ದು ಮೊದಲು ನಡೆದ ವರ್ತಮಾನಗಳೆಲ್ಲವನ್ನೂ ಸ್ವಲ್ಪವೂ ಬಿಡದೆ ಹೇಳಿದನು.

ರಾಜಾ ಅಮರಸಿಂಹನ ಮಂತ್ರಿಗಳು ವಿವಾಹ ವಿಷಯವಾಗಿ ಅವಸರಪಡುತ್ತಿರುವರೆನ್ನುವುದನ್ನರಿತ ಸರ್ವರೂ ಸಂತಸಗೊಂಡರು

ಸುಖಲತೆಯು ಈ ವಿವಾಹಕ್ಕೆ ತನ್ನ ಜನಕನ ಪೂರ್ಣ ಸಮ್ಮತವು ದೊರೆತದ್ದರಿಂದಲೇ ತನಗೆ ಸ್ವರ್ಗಸುಖವು ಲಭಿಸಿತೆಂದು ಪರಮಾನಂದಭರಿತಳಾದಳು.

ಪರಮೇಶ್ವರನ ಅಪಾರಕರುಣೆಯನ್ನು ಅರಿತವರಾರು? ಸರ್ದಾರ್‌ಸಿಂಹನಿಗೂ, ಸುಖಲತೆಗೂ ನಡೆದ ಉಪಚಾರಾದಿಗಳಿಗಳವಲ್ಲ ಧರ್ಮಗುಣ ರಮಣಿಯಾದ ಸುಖಲತೆಯು ಆಡಂಬರ-ಅಟ್ಟಹಾಸಾದಿಗಳನ್ನು ಬಿಟ್ಟು ಗುರುದಂಪತಿಗಳನ್ನು ಭಕ್ತಿಯಿಂದ ಪೂಜಿಸಿ, ವಿದ್ಯಾಸೋದರರಿಗೆ ಬೇಕಾದಷ್ಟು ಸೌಕರ್ಯಗಳನ್ನು ಕಲ್ಪಿಸಿ, ತನ್ನನ್ನು ವಿಪತ್ಕಾಲದಲ್ಲಿ ರಕ್ಷಿಸಿದ ಮೂಢಶಿಖಾಮಣಿಯಾದ ಮಂದಮತಿಗೆ ಭೂಸ್ಥಿತಿಯನ್ನಿತ್ತು, ಸಕಲರನ್ನೂ ತೃಪ್ತಿಗೊಳಿಸಿದಳು.

ಗುರುಮಹಾರಾಜರೂ, ಸುಮನೆಯೂ ಪರಮಾನಂದದಿಂದ ರಾಜಪುತ್ರನಿಗೂ ರಾಜಕುಮಾರಿಗೂ ವಿವಾಹಮಹೋತ್ಸವಕ್ಕೆ ತಕ್ಕ ಲಗ್ನವನ್ನು ನಿಶ್ಚೈಸಿ, ಈ ಶುಭ ವರ್ತಮಾನವನ್ನು ಅರಮನೆಗೆ ಹೇಳಿಕಳುಹಿಸಿದರು.

---

# ೧೯ ನೆ ಯ ಅ ಧ್ಯಾ ಯ ವು

## ಪದ್ಮಲತೆಯ ಚಂಚಲವು.



ರಮಣಿಯು ಸೂರ್ಯೋದಯಾನಂತರ ಚಿಂತಾಭರಿತವದನಳಾಗಿ ಹಾಸಿಗೆ ಬಿಟ್ಟೇಳದೆ ಕುಳಿತು ಏನೋ ಯೋಚಿಸುತ್ತಿದ್ದಳು ಅವಳ ರೂಪವು ದಂತದಿಂದ ಮಾಡಲ್ಪಟ್ಟ ಪ್ರತಿಮೆಯಂತಿದ್ದಿತು ರಮಣೀಯವಾದ ಆ ಮಂದಿರದಲ್ಲಿ ಸುಂದರಳಾದ ಕಾಮಿನಿಯು ಯೋಚನೆಯಲ್ಲಿ ಮೈಮರೆತು ಪ್ರಜ್ಞಾರಹಿತಳಾಗಿ ಕುಳಿತಿರುವಲ್ಲಿ ರೂಪವುಳ್ಳ ಯುವಕನೊಬ್ಬನು ನಗುಮುಖವುಳ್ಳವನಾಗಿ 'ಪದ್ಮಾ' ಎಂದು ಕೂಗಿದುದು ಕೇಳಿಸಲು ತಲೆಯೆತ್ತಿ ನೋಡಿದಳು.

'ರಮಣೀ, ನಾನೊಂದು ಶುಭವರ್ತಮಾನವನ್ನು ಹೇಳಿದರೆ ನನಗೇನು ಬಹುಮಾನ ಕೊಡುವೆ '? ಎಂದು ಕೇಳಲು, ಪದ್ಮಲತೆಯು-ಮಂತ್ರೀಶಾ, ನೀವು ಹೇಳತಕ್ಕ ವರ್ತಮಾನವು ಸುಖಲತೆಗೆ ಸಂಬಂಧವಾದುದಾದರ ನೀವು ಕೇಳಿದ ವಸ್ತುವನ್ನೆಲ್ಲಾ ಕೊಡಲು ಸಿದ್ಧಳಿರುವೆನು.

ಪ್ರತಾಪಸಿಂಹ--ಪದ್ಮಾ, ಮೊದಲು ಕೊಡುವುದಾಗಿ ಮಾತುಕೊಟ್ಟು ಆಮೇಲೆ ಕೊಡದಿದ್ದಲ್ಲಿ ಮಾಡುವುದೇನು? ರಮಣಿಯರು ಆತುರದಿಂದ ಕೇಳಿದ್ದನ್ನೆಲ್ಲ ಕೊಡುವುದಾಗಿ ಹೇಳಿ ತರುವಾಯ ಕೈ ಕೈ ಹಿಸುಕಿಕೊಳ್ಳುವುದು ಅವರ ಸ್ವಭಾವವು. ನೀನೂ ಈ ರೀತಿ ಮಾಡಿದರೆ?

ಪದ್ಮಲತೆ--ಹಾಗೆಂದೂ ಮಾಡುವುದಿಲ್ಲವೆಂದು ಭರವಸೆಯಿತ್ತರೆ ಸಾಕಷ್ಟೆ.

ಪ್ರತಾಪಸಿಂಹ—ನೋಡೋಣ, ರಾಜಕುಮಾರಿಯನ್ನು ಮಹಾರಾಜನು ಸಂಧಿಸಿ ಆನಂದೋತ್ಸವದಲ್ಲಿದ್ದುದಾಗಿ ವರ್ತಮಾನ ಬಂದಿರುವುದು. ಪಟ್ಟಣವನ್ನೆಲ್ಲ ಶೃಂಗರಿಸುವ ಏರ್ಪಾಡನ್ನು ಮಾಡುತ್ತಿರುವೆನು.

ಪದ್ಮಲತೆ--ನನ್ನ ಆಪ್ತಮಿತ್ರಳನ್ನು ನಾನು ನೋಡಬಾರದೇ? ಅವಳಿರುವ ಕಡೆಗೆ ನನ್ನನ್ನೂ ಕರೆದುಕೊಂಡು ಹೋಗಿ.

ಪ್ರತಾಪಸಿಂಹ--ಮೊದಲನೆಯ ವರ್ತಮಾನಕ್ಕೆ ನೀನು ಕೊಡುತ್ತೇನೆಂದು

ಹೇಳಿದ ಬಹುಮಾನವನ್ನು ಮೊದಲು ಕೊಟ್ಟುಬಿಡು, ತರುವಾಯ ಇತರ ವಿಷಯ ಗಳನ್ನು ಕುರಿತು ಮಾತನಾಡೋಣ.

ಪದ್ಮಲತೆ--ನಿಮಗೆ ಬೇಕಾದ ವಸ್ತುವು ಇಂಥದೆಂದು ತಿಳಿದರಲ್ಲವೇ, ನಾನು ಕೊಡುವುದಕ್ಕೆ?

ಪ್ರತಾಪಸಿಂಹ--ಪದ್ಮಾ, ನೀನು ಎಲ್ಲ ವಿಷಯವನ್ನೂ ಅರಿತಿದ್ದೂ ಅರಿಯದವ ಳಂತೆ ನಟಿಸುವೆ. ಸುಮ್ಮನೆ ಚರ್ಚೆಯೇಕೆ? ನಾನೇ ಹೇಳುತ್ತೇನೆ. ನಿನ್ನನ್ನೇ ನನಗೆ ಕೊಡುವಂತೆ ನಾನು ಕೇಳುವೆನು

ಪದ್ಮಲತೆ-ನನ್ನ ಕುಲ, ಗೋತ್ರ ಮೊದಲಾದವುಗಳನ್ನು ನಾನೇ ಅರಿಯೆನು. ಹೀಗಿರುವಲ್ಲಿ ನಾನು ವಾಗ್ದಾನಮಾಡುವುದು ಸರಿಯಾಗುವುದು ಹೇಗೆ?

ಪ್ರತಾಪಸಿಂಹ—ನಿನ್ನ ಮಾತನ್ನು ಕೇಳಿದರ ಅತ್ಯಾಶ್ಚರ್ಯವಾಗುವುದು. ನಿನ್ನ ಜನನವೃತ್ತಾಂತವನ್ನು ನೀನೇ ಅರಿಯೆಯಾ?

ಪದ್ಮಲತೆ--ಅಮಾತ್ಯಶೇಖರ, ನಾನು ಹುಟ್ಟಿದ್ದು ಮೊದಲು ರಾಜಾ ಅಮರಸಿಂ ಹನ ಗೃಹದಲ್ಲಾತನಿಂದ ಪಾಲಿಸಲ್ಪಟ್ಟದ್ದಾಗಿ ಜನರಾಡಿಕೊಳ್ಳುತ್ತಿರುವುದನ್ನು ಕೇಳಿ ರುವೆನು. ಬುದ್ಧಿಬಂದದ್ದು ಮೊದಲು ರಾಜಕುಮಾರಿಯ ಜೊತೆಯಲ್ಲಿದ್ದೇನೆ ಈ ಮಧ್ಯೆ ನನ್ನ ಜನನ ವೃತ್ತಾಂತವನ್ನು ನನಗಾರೂ ತಿಳಿಸಲಿಲ್ಲ.

ಪ್ರತಾಪಸಿಂಹ--ಈ ವಿಷಯಕ್ಕೆ ಸಂಬಂಧಿಸಿದ ಕಾರಣವಾವುದೋ ಇರಬೇಕು. ನೀನು ಉತ್ತಮಕುಲದಲ್ಲಿ ಜನಿಸದಿದ್ದರೆ ನಿನ್ನನ್ನು ರಾಜಕುಮಾರಿಯು ಸಹಚರಿಯಾ ಗಿರಲು ಅವಕಾಶಕೊಡಲಾರರು. ಯಾವುದು ಹೇಗಿದ್ದರೂ ಸರಿ. ನೀನು ನನಗೆ ಮಾತುಕೊಟ್ಟಂತೆ ನಡೆಯುವೆಯೋ, ಇಲ್ಲವೋ?

ಪದ್ಮಲತಾ—ನನ್ನ ಮನೋ ಚಾಂಚಲ್ಯವು ನೀಗಿ ಮನಸ್ಸಮಾಧಾನವುಂಟಾ ಗುವವರೆಗೂ ನನ್ನ ವಿಷಯದಲ್ಲಾವ ವಿಧವಾದ ತೀರ್ಮಾನವನ್ನೂ ನಿರ್ಧರಿಸಲಾಗು ವುದಿಲ್ಲ, ಕ್ಷಮಿಸಿ.

ಪ್ರತಾಪಸಿಂಹ-ಈ ವಿಷಯದಲ್ಲಿ ನಿನಗೇಕಿಷ್ಟು ಚಿಂತೆ? ಹೇಳಿದರೆ ನಾನು ಎಲ್ಲ ವನ್ನೂ ನಿರ್ಧರಮಾಡುತ್ತೇನೆ ನನ್ನಿಷ್ಟವನ್ನು ಮಾತ್ರ ನಿರಾಕರಿಸಬೇಡ

ಪದ್ಮಲತೆ-ನನ್ನ ಪ್ರಿಯಮಿತ್ರಳು ದೊರೆತರೆ ಅವಳ ಕಷ್ಟವನ್ನು ಮೊದಲು ಪರಿ

ಹರಿಸಿ ಅವಳು ಸೌಖ್ಯವಾಗಿರುವುದನ್ನು ಕಂಡಮೇಲೆ ನನ್ನ ಕಷ್ಟ ವಿಮೋಚನೆಗೆ ಮಾರ್ಗ ಹುಡುಕಬೇಕೆನ್ನುವುದೇ ನನ್ನ ಚಿಂತೆ.

ಪ್ರತಾಪಸಿಂಹ--ಸುಖಲತೆಯು ಮಹಾತ್ಮರ ಬಳಿ ವಾಸಿಸುತ್ತಿರುವಳು. ಮಹಾರಾಜನು ಅವಳನ್ನು ಕಂಡು ಮಾತನಾಡಿದ್ದಾಗಿ ವರ್ತಮಾನ ಬಂದಿದೆ ಮಹಾರಾಜರ ಆಗಮನಾರ್ಥವಾಗಿಯೇ ನಗರವು ಅಲಂಕರಿಸಲ್ಪಡುತ್ತಿರುವುದು ನನ್ನ ಮಾತಿನಲ್ಲಿ ನಿನಗೆ ನಂಬುಗೆಯಿಲ್ಲವೇನು ?

ಪದ್ಮಲತೆ—ಸರಿ, ನಿಮ್ಮ ತರ್ಕವೇನೋ ಈ ರೀತಿ ಪೂರೈಸಿತು. ನಿಮ್ಮ ತಂದೆಯ ಅನುಜ್ಞೆಯು ದೊರೆಯಿತೇ? ವಿವಾಹಾನಂತರ ನನ್ನ ವಿಷಯದಲ್ಲಿ ದೋಷವನ್ನಾರೋಪಿಸಿದರೆ ಅದರಿಂದ ನನಗೆ ಎಷ್ಟು ದುಃಖವುಂಟಾಗುವುದೆನ್ನುವ ವಿಷಯವಾಗಿ ಯೋಚಿಸಿದ್ದೀರಾ? ನಿಂದನಾ ವಾಕ್ಪ್ರಹಾರದಿಂದ ಅಂಗನೆಯು ಮರಣೋನ್ಮುಖಳಾಗುವಳೆನ್ನುವ ಚಿಂತೆಯು ನಿಮಗಿದೆಯೇ? ಪಿತೃಗೃಹವನ್ನು ತ್ಯಜಿಸಿ, ಯುವತಿಯಾದ ರಮಣಿಯು ಆದೇಕೆ ಬಂದಳೆಂಬ ಪ್ರಶ್ನೆಯುಂಟಾದಲ್ಲಿ ಏನುತ್ತರಕೊಡುವಿರಿ ?

ರಮಣಿಯ ಚಾತುರ್ಯ ವಚನವನ್ನು ಕೇಳಿದ ಮಂತ್ರಿಕುಮಾರನು ಸ್ತಬ್ಧನಾದನು. ಕ್ಷಣಮಾತ್ರದಲ್ಲಿ ಚತುರನಾದ ಪ್ರತಾಪಸಿಂಹನು ಪದ್ಮಲತೆಯ ಮಾತಿಗೆ ಸೋತನು.

ಸ್ವಲ್ಪಹೊತ್ತು ಯುವಕಯುವತಿಯರಿಬ್ಬರೂ ಬಾಯ್ಬಿಡಲಿಲ್ಲ. ಕೊನೆಗೆ ಪದ್ಮಲತೆಯು 'ರಾಜಕುಮಾರಿಯನ್ನು ರಾಜಪುತ್ರನು ಕಂಡು ಆನಂದಹೊಂದಿದ್ದಾಯಿತು. ರಾಜ್ಯದ ಪ್ರಜೆಗಳ ಮನವಾನಂದಹೊಂದಿ ಅಮರಸಿಂಹ ಮಹಾರಾಜನು ತನ್ನ ಪ್ರಿಯಪುತ್ರಿಯನ್ನು ಅತ್ಯಾನಂದದಿಂದ ಬಿಕನೇರರಸನಿಗೆ ಧಾರೆಯೆರೆಯಲು ಏನೇನು ಏರ್ಪಾಡುಮಾಡಿದ್ದೀರಿ? ಎಲ್ಲಾ ಕಾರ್ಯಗಳೂ ಮಾಡುವರು ನೋಡುವರಿಲ್ಲದೆ ಹಾಗೆಯೇ ಬಿದ್ದಿರಲು ಚಿಕ್ಕ ಮಕ್ಕಳಂತೆ ನಮ್ಮ ವಿವಾಹ, ನಮ್ಮ ಆನಂದ, ನಮ್ಮ ಸಂತೋಷ ಇವೇ ಪ್ರಾಧಾನ್ಯವಾದವೇ? ಮೊದಲು ಮಹಾರಾಜನ ಮನಕ್ಕಾನಂದವುಂಟು ಮಾಡಿ ತರುವಾಯ ಉಳಿದ ವಿಷಯಗಳನ್ನು ಚಿಂತಿಸೋಣ ಎಂದಳು.

ರಮಣಿಯ ವಾಕ್ಚಾತುರ್ಯವನ್ನು ಕಂಡ ಅಮಾತ್ಯಪುತ್ರನು ಲಜ್ಜೆಯನ್ನೂ, ಆಶ್ಚರ್ಯವನ್ನೂ ಹೊಂದಿದವನಾಗಿ 'ವಿವೇಕವತಿಯಾದ ಅಂಗನಾಮಣಿಯೇ, ಇನ್ನು ನಡೆಯತಕ್ಕ ಕಾರ್ಯಗಳನ್ನು ನೀನೇ ಮುಂದಾಳಾಗಿ ನಿಂತು ನಡೆಸಿದಲ್ಲಿ ಮಂಗಳವಾಗಿ

ನೆರವೇರುವುದು. ಮೊದಲು ನನ್ನ ತಂದೆಯನ್ನು ಕಂಡು ತೃಪ್ತಿಮಾಡಬೇಕು. ಇದಕ್ಕೆ ನೀನೇ ಒಂದು ಯುಕ್ತಿಯನ್ನು ಹೇಳು'' ಎಂದನು

ಅದಕ್ಕೆ ಪದ್ಮಲತೆಯು—''ಆರ್ಯಪುತ್ರಾ, ಈ ವೇಳೆಯಲ್ಲಿ ನಾನು ಸುಮ್ಮನಿದ್ದರೆ ಕಾರ್ಯವು ಕೆಡುವುದು. ಮೊದಲು ನಾನು ರಾಜಾ ಅಮರಸಿಂಹನ ಮಂತ್ರಿಗಳನ್ನು ಸಂಧಿಸುವ ಏರ್ಪಾಡುಮಾಡಿ. ಅವರಿನ್ನೂ ನಿಮ್ಮ ತಂದೆಯನ್ನು ಕಾಣಲಿಲ್ಲ. ನಾನ ವರನ್ನು ಕಂಡು ಸಮಯೋಚಿತವಾದ ಯುಕ್ತಿಯಿಂದ ಸಮಾಧಾನಗೊಳಿಸಿ, ನಿಮ್ಮ ತಂದೆಯ ಬಳಿ ಕಳುಹಿಸುವೆನು'' ಎಂದಳು.

ಪ್ರತಾಪಸಿಂಹನು ಪದ್ಮಲತೆಯ ವಚನಪ್ರಕಾರ ಪಲ್ಲಕ್ಕಿಯೊಂದನ್ನು ಸಿದ್ಧಗೊಳಿಸಿ ಅದರಲ್ಲಿ ಪದ್ಮಲತೆಯು ಕುಳಿತುಕೊಂಡ ನಂತರ ತಕ್ಕ ಸೈನ್ಯಪರಿವಾರವೇ ಮೊದಲಾದ ಮರ್ಯಾದೆಗಳ ಸಮೇತ ಅಮರಸಿಂಹನ ಮಂತ್ರಿಗಳು ಇಳಿದಿದ್ದ ಬಿಡಾರಕ್ಕೆ ಕಳುಹಿಸಿದನು ಪದ್ಮಲತೆಯನ್ನು ಬಾಲ್ಯಾರಭ್ಯ ನೋಡಿದವರಾದ್ದರಿಂದ ಅಮರ ಸಿಂಹನ ಮಂತ್ರಿಗಳು ಮರ್ಯಾದೆಯಿಂದ ಅವಳನ್ನು ತಮ್ಮ ಬಿಡಾರಕ್ಕೆ ಕರೆದುಕೊಂಡು ಉಚಿತಾಸನದಲ್ಲಿ ಕುಳ್ಳಿರಿಸಿದರು ಪದ್ಮಲತೆಯೂ ಅವರಿಂದ ಕೊಡಲ್ಪಟ್ಟ ಆಸನ ದಲ್ಲಿ ಕುಳಿತು 'ಪ್ರಭುವರ್ಯರೇ, ಮಂತ್ರಿಗಳೇ, ನಾನು ರಾಜಕುಮಾರಿಯ ವಿಷಯ ವಾಗಿ ಮಾತನಾಡಲು ಬಂದಿರುವೆನು. ರಾಜಾ ಅಮರಸಿಂಹನ ಕುಮಾರಿಯು ಬಿಕ ನೀರರಸನಾದ ಸರ್ದಾರ್‌ಸಿಂಹನನ್ನು ಬಿಟ್ಟು ಮತ್ತಾರನ್ನೂ ವರಿಸಳು. ಅವಳು ವಿರಕ್ತಿಯಿಂದ ಗುರುಮಹಾರಾಜರ ಆಶ್ರಮದಲ್ಲಿ ವಾಸಮಾಡುವುದರಿಂದ ನಿಮ್ಮನ್ನು ಕಾಣಲು ಬರಲಿಲ್ಲ. ಅವಳ ಮನೋಭಾವವೆಲ್ಲವನ್ನೂ ನಾನು ಪೂರ್ತಿಯಾಗರಿತಿರುವೆನು. ಮಂಜುಳೆಯ ಅಹಂಕಾರಾದಿ ಗುಣಗಳು ನೀವರಿಯದುವಲ್ಲ. ಆದರೆ ನಡೆದು ಹೋದ ಕಾರ್ಯಗಳನ್ನು ಕುರಿತು ಈಗ ಚಿಂತಿಸುವುದನ್ನು ಬಿಟ್ಟು, ನಮ್ಮ ಕಾರ್ಯವು ನಿರಾತಂಕವಾಗಿ ನೆರವೇರುವ ಉಪಾಯವನ್ನು ಮಾಡಲು ಒಮ್ಮನಸ್ಸಿನಿಂದಿರಬೇಕಾಗಿರುವುದು ಈ ನಗರಾಮಾತ್ಯನನ್ನು ಕಂಡು ಸುಖಲತೆಯ ಮನೋಭಿಪ್ರಾಯವನ್ನು ತಿಳಿಸಿ, ಅರಸನಿಗೆ ವಿವಾಹಮಾಡಿಕೊಳ್ಳುವಂತೆ ಹೇಳಿ ರಾಜಕುಮಾರಿಗಾಗಿಯೇ ನಾನಿಲ್ಲಿ ಬಂದಿರುವೆನೆಂದೂ, ಅವಶ್ಯವಿದ್ದಲ್ಲಿ ನಾನೇ ಬಂದು ಅಮಾತ್ಯನನ್ನು ನೋಡಿ ಮಾತನಾಡುವುದಾಗಿಯೂ ಹೇಳಿ ಕಾಲಹರಣ ಮಾಡುವುದರಲ್ಲಿ ಫಲವಿಲ್ಲ'' ಎಂದಳು.

ರಮಣಿಯ ಗಂಭೀರ ವಾಣಿಯನ್ನು ಕೇಳಿದ ಅಮಾತ್ಯಶ್ರೇಷ್ಠರು ಸ್ತಂಬಿತರಾಗಿ ತರುವಾಯ ಚೇತರಿಸಿಕೊಂಡು ಅವಳ ಸೂಚನೆಯಂತೆ ಮಂತ್ರಿ ರಘುನಾಥಸಿಂಹ

ನನ್ನು ಕಂಡು ಮಾತನಾಡಬೇಕೆಂದು ತೀರ್ಮಾನಿಸಿದರು. ಪದ್ಮಲತೆಯು, ಮಿತ್ರಳು ಮಹಾರಾಜನ ಅರ್ಧಾಂಗಿಯಾಗುವಳೆನ್ನುವುದನ್ನು ಅರಿತು, ಪರಮಾಹ್ಲಾದಹೊಂದಿ ಪ್ರತಾಪಸಿಂಹನನ್ನು ಕರೆದುತರುವಂತೆ ಸೇವಕನನ್ನು ಕಳುಹಿಸಿದಳು, ಮಂತ್ರಿಕುಮಾರನೂ ಬಂದನು ರಾಜಾ ಅಮರಸಿಂಹನ ಮಂತ್ರಿಗಳು ಪದ್ಮಲತೆಯು ಹೇಳಿದ ವಿಷಯಗಳನ್ನು ಸಾಂಗವಾಗಿ ಹೇಳಲು ಪ್ರತಾಪಸಿಂಹನು ತಲೆದೂಗಿ ಈ ವಿಷಯಗಳನ್ನು ತನ್ನ ತಂದೆಗೆ ತಿಳಿಸುವದಾಗಿ ಹೇಳಿದನು. ಪದ್ಮಲತೆಯು ತಾನು ಬಂದ ಕೆಲಸವು ಪೂರೈಸಿತೆಂದು ತಿಳಿದು-'ಸಚಿವೋತ್ತಮರಿರಾ, ನಾನು ಸುಖಲತೆಯನ್ನು ಕಾಣಲು ಹೋಗುವೆನು. ನನ್ನನ್ನು ನೀವು ನೋಡಬೇಕಾದರೆ ಇವರ ಮೂಲಕ ಹೇಳಕಳುಹಿಸಿದರೆ ಬರುತ್ತೇನೆ'' ಎಂದು ಹೇಳಿ ಪ್ರತಾಪಸಿಂಹನಕಡೆ ಕೈ ತೋರಿಸಿದಳು ಅವರು ಹಾಗೆಯೇ ಆಗಲೆಂದು ಸಮ್ಮತಿಸಿದರು.

ಪದ್ಮಲತೆಯು ಪಲ್ಲಕ್ಕಿಯನ್ನೇರಿ ತಾನಿದ್ದ ಗೃಹಾಭಿಮುಖಳಾದಳು. ಪ್ರತಾಪಸಿಂಹನು ಅಮರಸಿಂಹನಿಂದ ಬರೆಯಲ್ಪಟ್ಟ ನಿರೂಪವನ್ನು ತೆಗೆದುಕೊಂಡು, ತಂದೆಯನ್ನು ಕಂಡಾತನ ವಶಕ್ಕೆ ಕೊಟ್ಟನು. ರಘುನಾಥಸಿಂಹನಿಗೆ ಹಿಂದಿನ ವಿಷಯಗಳೊಂದೂ ತಿಳಿಯದ್ದರಿಂದ ರಾಜಕುಮಾರನಿಗೆ ವಿವಾಹ ನಡೆಸಬೇಕಾದದ್ದು ಮುಖ್ಯವೆಂದು ತನ್ನಲ್ಲಿ ತಾನೇ ಅಂದುಕೊಂಡು ಕುಮಾರನನ್ನು ನೋಡಿ 'ಪ್ರತಾಪಾ, ರಾಜಾ ಅಮರಸಿಂಹನ ಮಂತ್ರಿಗಳನ್ನು ಅತಿ ಮರ್ಯಾದೆಯಿಂದುಪಚರಿಸುವನಾಗು. ಅವರ ಜೊತೆಯಲ್ಲಿ ಮತ್ತಾರಾದರೂ ಬಂದಿದ್ದರೆ ಅವರಿಗೂ ತಕ್ಕ ಬಿಡಾರಗಳನ್ನೇರ್ಪಡಿಸು. ಅಜ್ಮೀರರಸನ ವಂಶ, ಕುಲ, ಕೀರ್ತಿ ಮೊದಲಾದವುಗಳು ಜಗತ್ಪ್ರಸಿದ್ಧವಾದವುಗಳು. ಆದರೆ ಈ ವಿವಾಹಕ್ಕೆ ಸರ್ದಾರ್‌ಸಿಂಹನು ಒಪ್ಪುವನೋ, ಇಲ್ಲವೋ? ರಾಜಕುಮಾರಿಯನ್ನು ನೋಡಿದ ಹೊರ್ತು ಯಾವ ತೀರ್ಮಾನವನ್ನೂ ಹೇಳಲಾಗುವುದಿಲ್ಲವೆಂದು ಹೇಳಿದರೆ ಮಾಡುವುದೇನು? ನಿನ್ನ ಪ್ರಾಣಮಿತ್ರನನ್ನು ಒಪ್ಪಿಸುವ ಭಾರವನ್ನು ನೀನೇ ವಹಿಸಿಕೋ'' ಎಂದನು 'ತಂದೆಯೇ, ಅಪ್ಪಣೆಯಂತೆ ನಡೆಯಲು ಸಿದ್ಧನಿರುವೆನು' ಎಂದು ಬೆಕ್ಕು ತಾನು ಕಣ್ಣುಮುಚ್ಚಿಕೊಂಡರ ಪ್ರಪಂಚಕ್ಕೆ ಏನೂ ತಿಳಿಯದೆಂದು ಭಾವಿಸಿಕೊಳ್ಳುವಂತೆ ನಡೆದ ವಿಷಯಗಳೊಂದನ್ನೂ ಅರಿಯದ ವೃದ್ಧತಂದೆಗೆ ವಿನಯದಿಂದ ಹೇಳಿದನು.

ತಂದೆಯು ಹೇಳಿದ ವಾಕ್ಯಗಳನ್ನು ಕೇಳಿದ ಕುಮಾರನಿಗೆ ನಗುವು ತಡೆಯದಷ್ಟು ಬಂದಿತು. ಈ ಯುವಕರ ಪ್ರೇಮಕಾರ್ಯಗಳು, ಗುಪ್ತಾಲೋಚನೆಗಳು ಅಂತ

ರಂಗ ಮರ್ಮಗಳು ವೃದ್ಧಾಮಾತ್ಯನಿಗೆ ಗೊತ್ತಾಗುವ ಬಗೆ ಹೇಗೆ? ಪ್ರಪಂಚಸ್ಥಿತಿಯೇ ಹೀಗೆ. ರಾಜಕುಮಾರನನ್ನೊಪ್ಪಿಸಲು ತಾನೆಷ್ಟು ಕಷ್ಟಪಡಬೇಕೆನ್ನುವ ವಿಷಯವನ್ನು ಮನದಲ್ಲಾಲೋಚಿಸುತ್ತಾ ಹೊರಟುಹೋದನು



# ೨೦ನೆಯ ಅಧ್ಯಾಯವು.

## ಪರಸ್ಪರ ಸಮಾಗಮ.




ತೇ, ನೀನೇಕೆ ಈ ರೀತಿ ಚಿಂತಿಸುವೆ? ಇಂದಿನವರೆಗೂ ಸಂತೋಷವನ್ನುಂಟುಮಾಡಿದ ಸರ್ವೇಶ್ವರನು ಮುಂದೆಯೂ ಸಂತೋಷವನ್ನೇ ಕೊಡುವನೆನ್ನುವುದನ್ನು ಮರೆತೆಯಾ? ಪ್ರತಾಪಸಿಂಹನು ಅತಿ ಬುದ್ಧಿವಂತನು ನಿರ್ವಿಘ್ನವಾಗಿ ಕಾರ್ಯವನ್ನು ಸಾಧಿಸುವುದರಲ್ಲಿ ಚತುರನು ನಿನ್ನನ್ನು ನಾನು ಕಂಡೆನೆಂಬ ವರ್ತಮಾನವನ್ನು ಕಳುಹಿಸಿದಾಗಲಿಂದ ಪ್ರತಿಯೊಂದು ನಿಮಿಷವೂ ನಮ್ಮ ವಿವಾಹಕ್ಕಾಗಿಯೇ ಪ್ರಯತ್ನಿಸುವನೆನ್ನುವುದನ್ನು ನಾನು ಬಲ್ಲೆ ''

'ಜೀವಿತೇಶ್ವರ, ಆಜನ್ಮದುಃಖಿನಿಯಾದ ನಿರ್ಭಾಗ್ಯಳಾದ ನನಗೆ ಸಂತೋಷವೂ, ಸುಖವೂ ಎಲ್ಲಿಂದ ಬರಬೇಕು? ರಾಜಕುಲೋತ್ತಮ, ನಾನಾಗಿ ಪ್ರಯತ್ನಪೂರ್ವಕವಾಗಿ ಯಾವ ಕಾರ್ಯವನ್ನೂ ಮಾಡಲಿಲ್ಲ ಅಕಸ್ಮಾತ್ತಾಗಿ ಪ್ರಾಪ್ತವಾದ ವಿಪತ್ಪರಂಪರೆಗಳನ್ನು ಕಣ್ಣಿನಿಂದ ನೋಡಿಯೂ ಕೂಡ ತಾವೀರೀತಿ ಮನೋರಾಜ್ಯಮಾಡುವುದು ನನಗತ್ಯಾಶ್ಚರ್ಯವನ್ನು ಉಂಟುಮಾಡುತ್ತಿರುವುದು ಸರಸ್ವತೀಸದನದಲ್ಲಿ ವಾಸಮಾಡುತ್ತಿದ್ದ ನನಗೀ ಪರ್ವತವಾಸವುಂಟಾಗುವ ವಿಧಿಯಿತ್ತಲ್ಲವೇ? ಇನ್ನೂ ಯಾವ ಕಷ್ಟಗಳು ನನ್ನನ್ನು ಹಿಂಬಾಲಿಸಲು ಕಾದಿರುವವೋ! ಈ ಕಷ್ಟಪರಂಪರೆಯ ಮಧ್ಯೆ ತಮ್ಮೊಡನೆ ಸಂಭಾಷಿಸುವ ಕಿಂಚಿತ್‌ಭಾಗ್ಯವು ಲಭಿಸಿರುವುದು ಇಷ್ಟೇ ನನಗೆ ಸಾಕು.

'ಪ್ರಿಯರಮಣೀ, ಹಾಗೆ ಹೇಳಬೇಡ, ನಾನು ನಿನ್ನನ್ನು ಬಿಟ್ಟು ಅಗಲಿದರಲ್ಲವೇ ವಿಪತ್ತು ನಿನ್ನ ಬಳಿ ಸುಳಿಯುವುದು? ಆ ಕಷ್ಟ ಸುಖಗಳನ್ನು ಸಮನಾಗಿ ಅನುಭವಿಸಲು ನಾವಿಬ್ಬರೂ ಜನಿಸಿರುವೆವು ಇನ್ನು ನಿನಗೆ ದುಃಖವೇಕೆ? ಚಿಂತೆಯೇಕೆ? ಅಸಮಾಧಾನವೇಕೆ? ಮನಶ್ಶಾಂತಿಯನ್ನು ಹೊಂದು ಸುಖಲತಾ, ಏಳು; ಸುಂದರ ಸುವಾಸಿತಪುಷ್ಪಭರಿತ ಲತೆಗಳಿಂದಲೂ, ಫಲಭರಿತವೃಕ್ಷಗಳಿಂದಲೂ ತಮ್ಮ ಕೋಕಿಲ

ಸ್ವರದಿಂದ ಕಿವಿಗಿಂಪಾದ ಕಿಲಕಿಲ ನಿನಾದಗೈಯ್ಯುವ ಪಕ್ಷಿಗಳಿಂದಲೂ, ಮಂದಮಾರುತದ ಸೊಂಪಿನಿಂದಲೂ ಕೂಡಿದ ಈ ವನದಲ್ಲಿ ಸ್ವಲ್ಪಹೊತ್ತು ವಿಹರಿಸಿದರೆ ನಿನ್ನ ಚಿಂತೆಯೂ ಬೇಸರಿಕೆಯೂ ನೀಗಿ, ಮನಸ್ಸಿಗೆ ಹರ್ಷವುಂಟಾಗುವುದು, ನಡೆ' ಎನ್ನುತ್ತಾ ಸರ್ದಾರ್‌ಸಿಂಹನು ರಾಜಕುಮಾರಿಯನ್ನಾಲಿಂಗಿಸಿಕೊಂಡು ಸಂತೈಸುತ್ತಾ ಹೇಳಲು, ಸುಖಲತೆಯು ಖಿನ್ನವದನಳಾಗಿ—'ಆತ್ಮೇಶ್ವರ, ಮಾನವನಿಗೆ ಬುದ್ಧಿ, ಶಕ್ತಿ, ಸ್ವಾತಂತ್ರ್ಯಾದಿಗಳು ಅತಿ ಮುಖ್ಯವಾದವುಗಳು. ಕರುಣಾಮೂರ್ತಿಯಾದ ಭಗವಂತನು ತನಗೆ ಅಪ್ರಾರ್ಥಿತವಾಗಿ ಕೊಟ್ಟಿರುವ ವಿವೇಕವನ್ನು ಸನ್ಮಾರ್ಗದಲ್ಲಿ ಪ್ರಯೋಗಿಸಿದಲ್ಲಿ ಪ್ರಜಾಸೌಖ್ಯವೂ, ಮನೋ ನೆಮ್ಮದಿಯೂ, ಇಹದಲ್ಲಿ ಸುಖವೂ, ಪರದಲ್ಲಿ ಸದ್ಗತಿಯೂ ಉಂಟಾಗುವುದು ಶಕ್ತಿಯಿಂದ ಸಕಲ ವಸ್ತುಗಳನ್ನೂ ಸ್ವಂತಮಾಡಿಕೊಳ್ಳುವೆವು ಸ್ವಾತಂತ್ರ್ಯದಿಂದ ಉತ್ತಮ ಸುಖಗಳನ್ನು ಅನುಭವಿಸಬಹುದು ಇಂತಹ ಗುಣಗಳಿಂದ ಅಲಂಕರಿಸಲ್ಪಟ್ಟವರಿಗೆ ಯಾವ ವಿಧದಲ್ಲೂ ಕಷ್ಟವುಂಟಾಗದು ತಮ್ಮನ್ನೇ ಪತಿಯಾಗಿ ವರಿಸಿದೆನು. ಮನಸ್ಸಿನಲ್ಲಿ ಬೇರೂರಿದ ದುಃಖಗಳನ್ನು ಕಿತ್ತುಹಾಕಿದೆನು ಆದರೆ, ಆದರ—

ಸರ್ದಾರ್‌ಸಿಂಹ--ಆದರೆ, ಆದರೆ ಏನು? ಹೆದರುವೆಯೇಕೆ? ಮನಸ್ಸನ್ನು ಬಾಧಿಸುತ್ತಿರುವ ವಿಷಯವನ್ನು ಹೇಳು.

'ಮಹಾರಾಜರ ಸುಖಸಂತೋಷಾದಿಗಳನ್ನು ವೃದ್ಧಿಮಾಡುವುದಕ್ಕೆ ಪ್ರತಿಯಾಗಿ ನನ್ನಿಂದ ಎಲ್ಲಿ ಕಳಂಕವು ಲೇಪಿಸಲ್ಪಡುವುದೋ?' ಎನ್ನುವುದೇ ನನ್ನ ದುರಂತವಾದ ಚಿಂತೆ.

ರಾಜಕುಮಾರನು ತನ್ನ ಪ್ರಾಣವಲ್ಲಭೆಯ ಕರಗಳನ್ನು ಪ್ರೇಮಾತಿಶಯದಿಂದ ಪಿಡಿದು ಅವಳ ಮುಂಗುರುಳನ್ನು ತಿದ್ದುತ್ತಾ--'ಆತ್ಮೇಶ್ವರೀ, ಅನ್ಯಾಯವಾಗಿ ದೋಷಾರೋಪಣೆ ಮಾಡತಕ್ಕವರು ಅಧಮರು. ವಿವೇಕಿಗಳು ವಿಚಾರ ಶಕ್ತಿಯುಳ್ಳವರು. ವಿವೇಕಿಗಳೂ, ಸದ್ಗುಣಿಗಳೂ ಇಲ್ಲದೆ ಪ್ರಪಂಚವು ಹಾಳಾಯಿತೆಂದು ತಿಳಿದೆಯಾ? ಯಾರೇನು ಹೇಳಿದರೂ ನೀನು ರಾಜಕುಮಾರಿಯೆನ್ನುವುದನ್ನಾದರೂ ನಿರಾಕರಿಸಲಾರರಷ್ಟೆ. ದೋಷಾರೋಪಣೆ ಮಾಡುವರು ಯಾರು? ನಿಂದಿಸುವ ಧೈರ್ಯವಾರಿಗಿರುವುದು? ಒಂದುವೇಳೆ ನಿಂದಿಸಿದರೂ ಅವುಗಳನ್ನು ಕಿವಿಗೊಟ್ಟು ಕೇಳುವರಾರು? ಇನ್ನೀ ವಿಚಾರವನ್ನು ಬಿಡು. ಹಾಗೇನಾದರೂ ಸಂಭವಿಸುವುದಾದರ ನನಗೀ ರಾಜ್ಯಸುಖವೇ ಬೇಡ. ಭಾರತ ಸಾಧ್ವೀಕುಲತಿಲಕಳಾದ ಸಾವಿತ್ರಿ, ಅವಳ ಪತಿ ಸತ್ಯವಾನರಂತೆ

ವನಚರಿಗಳಾಗಿ ನಮ್ಮ ಕಾಲವನ್ನು ಅತ್ಯಾನಂದದಿಂದ ಕಳೆಯೋಣ. ಹೀಗಿದ್ದರೂ ಅವರಿವರು ದೋಷಾರೋಪಣೆಮಾಡುವರೆನ್ನುವ ಭಯವು ನಿನಗಿನ್ನೂ ಇರುವುದೇನು?' ಎಂದನು. ರಾಜಪುತ್ರನೂ, ರಾಜಕುಮಾರಿಯೂ ಬಹಳ ಹೊತ್ತು ಮಾತನಾಡಲಿಲ್ಲ ಸುಖಲತೆಯ ಮೌನಮುದ್ರೆಯನ್ನು ನೋಡಿದ ರಾಜಕುಮಾರನ ತಾಳ್ಮೆಯು ವನಾಂತರವನ್ನೈದಿತು ಮಾತನಾಡುವಂತೆ ಪ್ರಾರ್ಥಿಸಿದನು, ಮುದ್ದಿಸಿದನು; ಚುಂಬಿಸಿದನು, ಆಲಿಂಗಿಸಿದನು ಕೊನೆಗೆ ಸುಖಲತೆಯು ಕುಳಿತಿದ್ದ ಸ್ಥಳದಿಂದ ಮೇಲಕ್ಕೆದ್ದು--'ಮಹಾರಾಜ, ಏನು ಹೇಳಿದಿರಿ? ಕೇವಲ ಒಂದು ಸ್ತ್ರೀ ವ್ಯಾಮೋಹ ದಿಂದ ಭೂಪತಿಯೆನ್ನುವ ನಾಮವನ್ನೇ ತ್ಯಜಿಸಲು ಮನಸ್ಸುಮಾಡಿರುವುದು ಬಹಳ ಚೆನ್ನಾಗಿರುವುದು! ನಾನು ಒಬ್ಬಳು, ನಿಮ್ಮ ಆಳ್ವಿಕೆಯಲ್ಲಿರತಕ್ಕ ಪ್ರಜೆಗಳಾದರೋ ಲಕ್ಷೋಪಲಕ್ಷ. ನಿಮ್ಮುಪಕಾರವನ್ನೂ, ಸಹಾಯವನ್ನೂ ಇದಿರು ನೋಡುತ್ತಿರುವ ಇಷ್ಟೊಂದು ಪ್ರಜೆಗಳ ಕ್ಷೇಮವನ್ನು ಕೋರುವುದು ಧರ್ಮವೋ, ಅಥವಾ ಕೇವಲ ನಶ್ವರವಾದ, ಕ್ಷಣಭಂಗುರವಾದ, ಕೆಲವು ದಿನ ಮಾತ್ರವಿದ್ದು ಮಾಯವಾಗುವ ಸ್ತ್ರೀ ವ್ಯಾಮೋಹದಿಂದ ಇಹಪರ ಸದ್ಗತಿಯನ್ನು ನಾಶಮಾಡಿಕೊಳ್ಳುವುದು ಧರ್ಮವೋ? ರಾಜೇಂದ್ರ, ಮತ್ತೊಂದು ಸಲ ಹೀಗೆ ಹೇಳದಿರಬೇಕೆಂದು ಪ್ರಾರ್ಥಿಸುತ್ತೇನೆ' ಎಂದು ಹೇಳಿ ರಾಜಕುಮಾರನ ಕರದ್ವಯಗಳನ್ನು ವಿನಯದಿಂದ ಹಿಡಿದುಕೊಂಡು ಪ್ರಾರ್ಥಿಸಿದಳು

'ರಮಣಿಯ ಶುಕವಾಣಿಯಂತಹ ವಾಕ್ಸರಣಿಯನ್ನು ಕಂಡ ರಾಜಕುಮಾರನು ವಿಸ್ಮಿತನಾದನು ಇವರೀರೀತಿ ಸಂಭಾಷಿಸುತ್ತಿರುವಲ್ಲಿ ರಾಜಾ ಅಮರಸಿಂಹನೂ, ಆತನ ಮಂತ್ರಿಗಳೂ ರಘುನಾಥಸಿಂಹ, ಪ್ರತಾಪಸಿಂಹ ಮೊದಲಾದವರೂ ಇವರಿಬ್ಬರನ್ನೂ ಹುಡುಕಿಕೊಂಡು ಬರುವುದನ್ನು ಕಂಡ ಸರ್ದಾರ್‌ಸಿಂಹನು—'ಕಾಂತೆ, ಅಲ್ಲಿ ಬರುವವರು ಯಾರೆನ್ನುವುದನ್ನು ನೋಡು, ನಿನ್ನ ತರ್ಕವನ್ನು ಇನ್ನಾದರೂ ಬಿಡು' ಎಂದು ಹೇಳಲು, ಸುಖಲತೆಯು ಅವರನ್ನು ನೋಡಿ ಲಜ್ಜೆಯಿಂದ ಸಮೀಪದಲ್ಲಿದ್ದ ಸಂಪಿಗೆಯ ಮರದ ಬಳಿ ಹೋದಳು. ರಾಜಕುಮಾರನು ಅವಳನ್ನಿದಿರುಗೊಳ್ಳಲು ಹೋದನು.

ಸರ್ದಾರ್‌ಸಿಂಹನನ್ನು ಕಂಡ ರಘುನಾಥಸಿಂಹನು ಆಲಿಂಗಿಸಿಕೊಂಡು ಮಾನಸಿಂಹನ ಕಡೆ ತಿರುಗಿ-'ರಾಜಾಧಿರಾಜ, ಇವನೇ ನನ್ನ ಮಗನು. ನಿಮ್ಮ ಪುತ್ರಿಗೆ ತಕ್ಕ ವರನೇ, ನೋಡಿ' ಎಂದು ನಗುತ್ತಾ ಕೇಳಲು, ರಾಜಾ ಅಮರಸಿಂಹನು 'ವಿವೇಕವಂತನಾದ ಮಂತ್ರಿಶ್ರೇಷ್ಠನೇ, ಅಗೋ ಅಲ್ಲಿ ನಿಂತಿರುವವಳು ನನ್ನ ಪುತ್ರಿಯು.

ಅವಳನ್ನು. ಕಂಡು ಮಾತನಾಡುವಂತೆ ನಿಮ್ಮ ಮಗನಿಗೆ ಹೇಳಿ' ಎನಲು ರಾಜ ಮಂತ್ರಿಗಳ ಮಾತನ್ನು ಕೇಳಿದ ಎಲ್ಲರೂ ನಕ್ಕು--'ಮಹಾರಾಜನೂ, ಮಹಾರಾಣಿಯೂ ಚಿರಾಯುಷ್ಯರಾಗಿರಲಿ. ಇಂದು ನಮ್ಮ ಮನಸ್ಸು ತೃಪ್ತಿಹೊಂದಿತು' ಎಂದರು

ರಘುನಾಥಸಿಂಹನು ರಾಜಕುಮಾರಿಯನ್ನು ಕಾಣಲು ಅವಳು ನಿಂತಿದ್ದ ಮರದ ಸಮೀಪಕ್ಕೆ ಹೋದಾಗ ಅಲ್ಲಿ ಆ ರಮಣಿಯು ಇಲ್ಲದ್ದನ್ನು ಕಂಡು ಭ್ರಮಿಸಿದನು. ಸ್ವಲ್ಪದೂರದಲ್ಲಿ ಗುರುಪತ್ನಿಯಾದ ಸುಮನಾ ಪದ್ಮಲತೆಯರು ಸುಖಲತೆಯೊಡನೆ ಮಾತನಾಡುತ್ತ ಬರುತ್ತಿರುವುದನ್ನು ಕಂಡೆಲ್ಲರೂ ಆಶ್ಚರ್ಯಪಟ್ಟರು. ವಿವಾಹವು ಅಜ್ಮೀರಿನಲ್ಲೇ ನಡೆಯಬೇಕೆಂದೂ, ವಿವಾಹದ ದಿನವು ಸಮೀಪಿಸುವವರೆಗೂ ವಧುವು ವಧುವಿನ ಪಿತೃಗೃಹದಲ್ಲಿಯೂ ವರನು ಬಿಕನೀರಿನಲ್ಲಿಯೂ ಇರಬೇಕೆಂದೂ ನಿಶ್ಚಯಿಸಲ್ಪಟ್ಟಿತು ಗುರುಮಹಾರಾಜನ ಆಶ್ರಮದಲ್ಲಿ ಆನಂದೋತ್ಸವವು ನಡೆಯಿತು. ಸರ್ವರೂ ಹರ್ಷದಿಂದ ಆ ವನದೇವತೆಯ ರಮಣೀಯ ರೂಪರಾಶಿಯನ್ನು ಕಂಡಾನಂದಿಸುತ್ತಲಿದ್ದರು

ಕುಮಾರಿಯನ್ನು ಕಾಣಲು ಮಹಾರಾಜನು ಅಪೇಕ್ಷಿಸುವುದಾಗಿ ಗುರುಮಹಾರಾಜನು ತಿಳಿಸಲು ರಮಣಿಯು ಭಯಭಕ್ತಿಯಿಂದ ರಾಜಾ ಅಮರಸಿಂಹನ ಪಾದದಲ್ಲಿ ಬಿದ್ದು ಸಾಷ್ಟಾಂಗ ಪ್ರಣಾಮಮಾಡಲು, ತನ್ನನ್ನು ವಂದಿಸಿದ ಕುಮಾರಿಯನ್ನು ಆಶೀರ್ವದಿಸಿ-'ವತ್ಸೇ, ನಿನಗೆ ದ್ರೋಹಮಾಡಿದ ಪಿತನನ್ನು ಕಾಣಲು ನೀನು ಪುನಃ ಬಂದದ್ದು ಪೂರ್ವಪುಣ್ಯಫಲವಲ್ಲದೆ ಬೇರಿಲ್ಲ. ಕುಮಾರೀ, ನೀನಿನ್ನು ಚಿಂತೆಯನ್ನು ಬಿಡು ಮಾಯಾಧೀನನಾಗಿ ನಿನ್ನುತ್ತಮ ಗುಣವನ್ನರಿಯದೆ ಉನ್ಮತ್ತನಂತೆ ವರ್ತಿಸಿದೆನು. ಉತ್ತಮ ಗುಣವತಿಯಾದ ನಿನ್ನ ತಾಯಿಯ ಮರಣಾನಂತರ ನನ್ನ ಸದ್ಗುಣಗಳೆಲ್ಲವೂ ಮಾಯವಾದವು. ಹಿಂದೆ ನಡೆದ ವಿಷಯಗಳನ್ನು ಮರತುಬಿಡು. ಈ ದಿನ ಸಾಯಂಕಾಲ ನಮ್ಮ ದೇಶಕ್ಕೆ ಹೊರಡೋಣ. ಕ್ಷಿಪ್ರದಲ್ಲಿಯೇ ವಿವಾಹವು ನೆರವೇರುವುದರಿಂದ ನಿನ್ನ ಮನಸ್ಸಿಗಾನಂದವುಂಟಾಗಬಹುದೆಂದು ಎಣಿಸುತ್ತೇನೆ' ಎಂದನು

ಇದಕ್ಕೆ ಸುಖಲತೆಯು 'ತಂದೆಯೇ, ನನ್ನದೊಂದು ವಿಜ್ಞಾಪನೆಯುಂಟು. ನನ್ನ ಕಷ್ಟಸುಖದಲ್ಲಿ ಭಾಗಿಯಾಗಿದ್ದ ನನ್ನ ಇಷ್ಟಸಖಿಯಾದ ಪದ್ಮಲತೆಯ ಸುಖವನ್ನೂ ಕೋರುವುದು ತಮ್ಮ ಕರ್ತವ್ಯವು ಅವಳ ಜನ್ಮ ವೃತ್ತಾಂತವನ್ನು ಸಕಲರೂ ಅರಿಯುವಂತೆ ತಿಳಿಸಿ ಅಮಾತ್ಯ ರಘುನಾಥಸಿಂಹರ ಕುಮಾರನಾದ ಪ್ರತಾಪಸಿಂಹನಿಗೆ ವಿವಾಹಮಾಡಿಸಬೇಕೆಂದು ಪ್ರಾರ್ಥಿಸುತ್ತೇನೆ' ಎಂದು ಹೇಳಿ ನಮಸ್ಕರಿಸಿದಳು

ಕುಮಾರೀ, ಪದ್ಮಲತೆಯ ಜನ್ಮವೃತ್ತಾಂತವನ್ನೇ ನೀನು ಕೇಳುವುದು? ಇಗೋ ಸಕಲರೂ ಅರಿಯುವಂತೆ ಹೇಳುವೆನು ಅವಳ ಬಲತಾಯಿಯ ಕಾಠಿಣ್ಯವನ್ನು ತಡೆಯಲಾರದೆ ನಿನ್ನ ತಾಯಿಯು ಅವಳನ್ನು ನಮ್ಮರಮನೆಗೆ ಕರೆದುತಂದಳು. ನಿಮ್ಮ ತಾಯಿಗೆ ಸಹೋದರನೊಬ್ಬನಿರುವನು. ಆತನ ಮೊದಲನೆಯ ಹೆಂಡತಿಯು ಪದ್ಮಲತೆಯು ಹುಟ್ಟಿದ ಕೂಡಲೇ ಮರಣವಾಗಲು ನನ್ನಂತೆ ಅವನೂ ಪುನಃ ವಿವಾಹವಾದನು. ದ್ವಿತೀಯಪತ್ನಿಯು ಕುಮಾರಿಯನ್ನು ದ್ವೇಷಿಸುತ್ತಿರುವುದನ್ನರಿತ ನಿನ್ನ ಜನನಿಯು ಆ ಬಾಲಕಿಯನ್ನು ತಾನೇ ಪೋಷಿಸಲಾರಂಭಿಸಿದಳು ಉತ್ತಮ ಕುಲದಲ್ಲಿ ಜನಿಸಿದ ಕನ್ಯಾಶಿರೋಮಣಿಯಾದ ಪದ್ಮಲತೆಯನ್ನು ಅಮಾತ್ಯಪುತ್ರನಾದ ಪ್ರತಾಪಸಿಂಹನಿಗೆ ವಿವಾಹಮಾಡಿಕೊಡುವುದು ನನಗೆ ಬಹಳ ಸಂತೋಷಕರ ಮಂತ್ರಿ ರಘುನಾಥಸಿಂಹನಿಗೆ ಈ ವರ್ತಮಾನವನ್ನು ತಿಳಿಸಿ ನಿನ್ನ ವಿವಾಹದ ದಿನವೇ ಅವಳಿಗೂ ವಿವಾಹ ನಡೆಸುವಂತೆ ಅವಳ ತಂದೆಯಮೂಲಕ ಏರ್ಪಾಡುಮಾಡುವೆನು' ಎಂದನು

ಪದ್ಮಲತೆಯು ತನ್ನ ಸೋದರಮಾವನ ಮಗಳೆನ್ನುವುದನ್ನರಿತ ಸುಖಲತೆಯು ಪರಮಾನಂದ ಭರಿತಳಾಗಿ ಓಡಿಹೋಗಿ ಅವಳನ್ನು ಆಲಿಂಗಿಸಿಕೊಂಡಳು. ಕಾರಣವನ್ನರಿಯದ ಪದ್ಮಲತೆಯು 'ಸುಖಲತಾ, ಇದೇನು ಹುಡುಗಾಟ ನೀನೇನು ಹಸುಮಗುವೇ?' ಎನಲು ಸುಖಲತೆಯು-'ಹೌದು, ಹೌದು, ನಿನಗೂ ಒಂದು ಹಸುಮಗು ಹುಟ್ಟುತ್ತದೆ' ಎಂದವಳ ಬೆನ್ನುತಟ್ಟಿದಳು

## ೨೧ನೆಯ ಅಧ್ಯಾಯವು

### ಮಂಜುಳೆಯ ಗಾಂಭೀರ್ಯವು



'ಇನ್ನು ನನ್ನಾಸೆಗಳೆಲ್ಲವೂ ನಿರಾಸೆಯಾದವು ಈ ಪ್ರಪಂಚದಲ್ಲಿ ನಾನನುಭವಿಸಬೇಕೆಂದಿದ್ದ ಸುಖಗಳೆಲ್ಲವೂ ನಾಶವಾದವು ನಾನದೇಕೆ ಈ ಜಗತ್ತಿನಲ್ಲಿ ಜನ್ಮವೆತ್ತಿದೆನು ದುರಾತ್ಮನಿಗೆ ಮಗಳಾಗಿ ಹುಟ್ಟಿದ್ದರಿಂದ ದುರ್ಗುಣಿಯಾಗಿ ಜನನಿಂದೆಗೆ ಪಾತ್ರಳಾಗಬೇಕಾಯಿತು ನನ್ನ ಪಿತನ ದುಷ್ಟತನವೇ ನನ್ನ ಸರ್ವನಾಶಕ್ಕೆ ಮೂಲವಾಯಿತು. ಮಾನಸಿಂಹನ ಉನ್ಮತ್ತತೆಗೂ ನನ್ನ ಜನಕನೇ ಮೂಲಕಾರಣ. ಪದ್ಮ

ಲತೆಯ ತಾಯಿಯನ್ನು ಕೊಲ್ಲಿಸಿ, ಅವಳ ಪತಿಗೆ ನನ್ನ ತಂಗಿಯನ್ನು ತಂದೆಯು ವಿವಾಹಮಾಡಿಸಿದನು. ಇಷ್ಟು ಸಾಲದೆಂದು ಅಜ್ಮೀರರಸನಿಗೆ ನನ್ನನ್ನು ವಿವಾಹ ಮಾಡಿಸಿದನು. ಕನ್ಯಾರತ್ನವಾದ ಪದ್ಮಲತೆಯನ್ನವಳ ಬಲತಾಯಿಯು ಹಿಂಸಿಸುವು ದನ್ನು ತಿಳಿದು, ಉತ್ತಮ ಗುಣವತಿಯಾದ ಸರಸ್ವತಿಯು ಅವಳನ್ನು ತನ್ನ ಗೃಹಕ್ಕೆ ಕರೆದುತಂದು ಪೋಷಿಸಲಾರಂಭಿಸಿದಳು ಕೆಲವುದಿನಗಳಿಗೆಲ್ಲಾ ಸರಸ್ವತಿಗೂ ಸುಖಲತೆ ಯೆನ್ನುವ ಕನ್ಯಾರತ್ನವುದಿಸಿತು. ಆ ರಮಣೀರತ್ನವು ಪರಂಧಾಮವನ್ನೈದಲು ಸಾಧುಶ್ರೇಷ್ಠನಾದ ಮಹಾರಾಜನು ನನ್ನನ್ನು ದ್ವಿತೀಯ ಪತ್ನಿಯನ್ನಾಗಿ ವರಿಸಿ, ನಾನು ಮಾಡಿದ ಪಾಪಕೃತ್ಯಗಳನ್ನೆಲ್ಲಾ ಸಹಿಸಿದನು. ಇನ್ನೊಬ್ಬರಿನ್ನೊಬ್ಬರಾಗಿದ್ದರೆ ಇಷ್ಟು ತಾಳ್ಮೆಯಿಂದಿರುತ್ತಿದ್ದರೇ? ವಿಧಾತಾ, ಕುಲತಿಲಕಳಾದ ರಮಣೀರತ್ನವನ್ನು ಕೊಲ್ಲಯ ತ್ನಿಸಿದೆನು ಕರುಣಾಮೂರ್ತಿಯಾದ ಜಗದೀಶ್ವರನು ಅವಳ ಭಾಗದಲ್ಲಿದ್ದು ರಕ್ಷಿಸಿ ದನು ಸುಖಲತೆಯನ್ನು ರಾಜಕುಲಚೂಡಾಮಣಿಯಾದ ಬಿಕನೀರರಸನು ವಿವಾಹ ವಾಗುವನೆಂದು ಕೇಳಿ ನನಗೆ ಪರಮಸಂತೋಷವುಂಟಾಯಿತು ಕಪಟರಹಿತಳಾದ ಕನ್ಯಾಮಣಿಯನ್ನು ಇಲ್ಲಿಗೆ ಕರದುತರಲು ಮಹಾರಾಜರು ಹೋಗಿರುವರು ಅವಳಿಗೆ ಕೇಡನ್ನು ಬಗೆದ ನಾನು ಹೇಗೆ ಅವಳಿಗೆ ಮುಖವನ್ನು ತೋರಿಸಲಿ? ರಾಜಕುಮಾರಿ ಯು ನನ್ನಲ್ಲಿ ಕೋಪಗೊಳ್ಳಲಾರಳಾದರೂ ನನ್ನ ಮನಸ್ಸಾಕ್ಷಿಯೇ ನನ್ನನ್ನು ಕೊಲ್ಲು ತ್ತಿರುವುದು. ವತ್ಸೇ, ನೀನು ನನ್ನ ವಿಷಯದಲ್ಲಿ ಅತೃಪ್ತಿಗೊಳ್ಳದಿದ್ದರೂ ನಿನಗೆ ಮುಖ ತೋರಿಸಲು ನನ್ನ ಮನವೊಪ್ಪದು. ನೀನು ನನ್ನನ್ನು ನೋಡುವಮೊದಲು ನಾನು ಸಾಯುವುದು ಉತ್ತಮ ಪ್ರಿಯಕುಮಾರೀ, ನೀನು ಸುಖವಾಗಿರು. ನೀನು ಸಕಲ ಸೌಭಾಗ್ಯಗಳಿಂದ ಕೂಡಿದವಳಾಗಿ ಅನೇಕ ವರ್ಷಗಳು ಬಾಳಬೇಕೆಂದು ಈಶ್ವ ರನನ್ನು ಪ್ರಾರ್ಥಿಸುತ್ತಾ ಈ ಕಾಗದವನ್ನು ಬರೆಯುತ್ತೇನೆ ನನ್ನಲ್ಲಿರುವ ಕೋಪ ವನ್ನೆಲ್ಲಾ ಬಿಟ್ಟು ನನ್ನಾತ್ಮವು ಸುಖಹೊಂದುವಂತೆ ಪ್ರಾರ್ಥಿಸುವೆಯೆಂದು ನಂಬು ತ್ತೇನೆ' ಎಂದು ಹೇಳಿಕೊಳ್ಳುತ್ತಾ ಕೆಳಗೆ ಕಂಡುಬರುವಂತೆ ಕಾಗದವನ್ನು ಬರೆಯ ಲಾರಂಭಿಸಿದಳು.

'ಆರ್ಯಕುಲ ರಮಣೀರತ್ನವೇ,

ನಾನಿಂಥವಳೆನ್ನುವುದನ್ನು ನೀನು ಈ ಕಾಗದವನ್ನೋದಿದ ಮಾತ್ರದಲ್ಲಿಯೇ ಗ್ರಹಿಸುವೆ. ನೀನೂ, ನಿನ್ನ ಕಾಂತನೂ ಈ ಜಗತ್ತಿನಲ್ಲಿ ಸದಾ ಸುಖಿಗಳಾಗಿ ಸನ್ಮಾ ರ್ಗವಂತರಾಗಿ, ಸದ್ಧರ್ಮ ನಿರತರಾಗಿ, ಸತ್ಕಾರ್ಯಗಳನ್ನು ಮಾಡುತ್ತಾ, ಸಂತಾನ ಸಂ ಪತ್ತು ಮೊದಲಾದ ಅಷ್ಟೈಶ್ವರ್ಯವಂತರಾಗಿ ಬಾಳಿರಿ. ವತ್ಸೇ, ನನ್ನನ್ನು ನೀನು

ಹೇಗೆ ಬೇಕಾದರೂ ತಿಳಿದುಕೋ. ಮರಣಕಾಲದಲ್ಲಿ ಶತ್ರುವನ್ನು ಕೂಡ ಮಿತ್ರನೆಂದೆಣಿಸಬೇಕೆಂದು ಧರ್ಮಶಾಸ್ತ್ರವು ಮೊರೆಯಿಡುವುದಷ್ಟೆ. ನಾನು ಈಗ ಸಾಯುವ ಯತ್ನದಲ್ಲಿರುವೆನು ನೀನು ನನ್ನನ್ನು ಕಂಡರೆ ಸಾಯಲು ಅಡ್ಡಿಮಾಡುವೆಯೆಂಬುದನ್ನರಿತೇ ನೀನು ಬರುವ ಮೊದಲೇ ಸಾಯಬೇಕೆಂದು ತೀರ್ಮಾನಮಾಡಿದೆನು. ನಿನ್ನನ್ನು ಕಾಣಬೇಕೆನ್ನುವ ಕುತೂಹಲವು ಬಹಳವಾಗಿದ್ದಾಗ್ಗೂ ಸಾಧ್ಯವಾಗುವಂತಿಲ್ಲ ನನ್ನ ಮುಖವನ್ನು ನಿನಗೆ ತೋರಿಸಲು ಇಷ್ಟವಿಲ್ಲ. ನಿನ್ನ ತಂದೆಗೂ ನಾನಾಚರಿಸಿದ ದ್ರೋಹಕ್ಕಾಗಿ ನಾನು ಪಶ್ಚಾತ್ತಾಪಪಡುವುದು ಅಷ್ಟಿಷ್ಟಲ್ಲ. ಹೆಚ್ಚು ಮಾತಿನಿಂದೇನು ಪ್ರಯೋಜನ? ರಮಣೀಕುಲರತ್ನವೇ, ನಿನ್ನ ಪತಿಯೊಡನೆ ಇಹಪರ ಧರ್ಮಗಳನ್ನಾಚರಿಸಿ, ಸೌಖ್ಯವಾಗಿ ಬಾಳು ಇನ್ನು ನನ್ನನ್ನು ಮರತುಬಿಡು.

ಇತಿ ನಿನ್ನ ವಿಶ್ವಾಸಕ್ಕೆ ಪಾತ್ರಳಾದ

ಮಂಜುಳಾ.

'ಅಕ್ಕಾ ಅಕ್ಕಾ, ಅಯ್ಯೋ! ದೆವ್ವಬಂತು. ನನಗೆ ಭಯವಾಗುತ್ತದೆ, ಓಡಿಬಾ. ಓಡಿಬಾ' ಎಂದು ಮಾನಸಿಂಹನು ಅರಿಚುತ್ತಾ ಓಡಿಬರುವುದನ್ನು ಕಂಡ ಮಂಜುಳೆಯು—'ಅಯ್ಯೋ! ಹುಚ್ಚಾ, ಈಗ ನೀನೆಲ್ಲಿಂದ ಬಂದೆ? ಎಲ್ಲಾದರೂ ಹಾಳಾಗಬಾರದೇ? ಈಗ ನಿನ್ನನ್ನು ಕಟ್ಟಿಕೊಂಡು ಅಳುವರಾರು?' ಎಂದು ಗದರಿಸಿದಳು.

ಹಿಂದುಗಡೆಯಿಂದ ಮಂಜುಳೆಯ ಕಣ್ಣುಗಳನ್ನು ಯಾರೋ ಮುಚ್ಚಿದಂತಾಗಲು—'ಮಾನಸಿಂಹ, ಇದೇನು ಹುಡುಗಾಟ! ಕೈಯನ್ನು ತೆಗೆ' ಎಂದು ಹೇಳುತ್ತಾ ಮುಚ್ಚಿದ್ದ ಕೈಗಳನ್ನು ಬಿಡಿಸಯತ್ನಿಸಿದಳು ಆದರ ಕಣ್ಣುಗಳು ಬಲವಾಗಿ ಮುಚ್ಚಲ್ಪಟ್ಟಿದ್ದುದರಿಂದ ಮಂಜುಳೆಯು ಸಿಟ್ಟಿನಿಂದ 'ಮೂರ್ಖಪಿಶಾಚವೇ, ನಿನ್ನನ್ನೂ ಕೊಂದು ನಾನೂ ಸಾಯುತ್ತೇನೆ' ಎಂದು ಘರ್ಜಿಸಲು 'ಚಿಕ್ಕಮ್ಮಾ, ಕೋಪಗೊಳ್ಳಬೇಡ. ನಿಮ್ಮ ಕಣ್ಣುಗಳನ್ನು ಮುಚ್ಚಿದವಳು ನಾನೇ' ಎನಲು-'ಆಹಾ! ಸುಖಲತಾ, ಎಲ್ಲಿದ್ದೆ? ಅಯ್ಯೋ! ದ್ರೋಹಿಯಾದ ನನ್ನನ್ನು ಸ್ಪರ್ಶಿಸಿದೆಯಲ್ಲ. ಪಾಪಿಷ್ಠಳನ್ನು ದರ್ಶಿಸಿದೆಯಲ್ಲ. ನೀನು ಬರುವೆಯೆನ್ನುವುದನ್ನು ಮಾತ್ರ ನಾನರಿತಿರುವ ಪಕ್ಷದಲ್ಲಿ ಇಷ್ಟು ಹೊತ್ತು ನನ್ನ ಜೀವವು ಉಳಿಯುತ್ತಿತ್ತೇ? ಮಗೂ, ಕೃತಘ್ನಳನ್ನು ಕಾಣಲು ಬಂದೆಯಾ' ಎಂದು ಹೇಳಿ ಸುಖಲತೆಯನ್ನು ತಬ್ಬಿಕೊಂಡು ಅತ್ತಳು.

ಈ ರೀತಿ ದುಃಖಿಸುತ್ತಿದ್ದ ಮಂಜುಳೆಯನ್ನು ಕಂಡ ಸುಖಲತೆಯು 'ತಾಯೇ, ನೀವು ಈ ರೀತಿ ಮಾಡುವಿರೆಂಬುದನ್ನುದ್ದೇಶಿಸಿಯೇ ನಾನೂ, ಪದ್ಮಲತೆಯೂ ಅಷ್ಟು

ಬೇಗ ಓಡಿಬಂದೆವು. ನೀವೂ ಮಾನಸಿಂಹನೂ ಮಾತನಾಡುತಿದ್ದುದನ್ನೆಲ್ಲಾ ಪಕ್ಕದ ಕೊರಡಿಯಲ್ಲಿದ್ದುಕೊಂಡು ನಾವು ಕೇಳುತ್ತಿದ್ದೆವು. ದುರಾದೃಷ್ಟವು ಸ್ತ್ರೀ ರತ್ನವಾದ ನಿಮ್ಮನ್ನು ಆವರಿಸಿದ್ದುದರಿಂದ ನೀವು ಹೀಗೆಲ್ಲಾ ನಡೆದುಕೊಳ್ಳುವಂತಾಯಿತು. ಅದೇಕೆ ಪ್ರಾಣತ್ಯಾಗಮಾಡಬೇಕು? ಜನಗಳು ನನ್ನನ್ನು ನಿಂದಿಸಬೇಕೆಂದೇ? ತಾಯಿ, ನೀವು ಜೀವಿಸಿರುವುದರಿಂದ ನಮಗೆ ಅತ್ಯಾನಂದವಾಗುವುದು. ಮರಣಹೊಂದಿದರೆ ದುಃಖವುಂಟಾಗುವುದು. ಬನ್ನಿ, ತಂದೆಗೆ ನಿಮ್ಮಲ್ಲಿರುವ ಕೋಪವನ್ನು ಹೋಗಲಾಡಿಸುವೆನು' ಎಂದು ಹೇಳಿ ಚಿಕ್ಕಮ್ಮನ ಕೈಗಳನ್ನು ಹಿಡಿದೆಳೆದುಕೊಂಡು ಹೋದಳು. ಮಂಜುಳೆಯು ಪ್ರೀತಿಯಿಂದ 'ಸುಖಲತಾ, ನನ್ನಲ್ಲಿ ನಿನಗೇಕಿಷ್ಟು ವಿಶ್ವಾಸ, ಮಹಾನುಭಾವನಾದ ನಿನ್ನ ತಂದೆಯ ದರ್ಶನಮಾಡಲು ನಾನು ಅರ್ಹಳಲ್ಲ. ನೀನು ಕ್ಷಮಿಸಿದಂತೆ ಮಹಾರಾಜನು ನನ್ನನ್ನು ಕ್ಷಮಿಸಲಾರನು. ಕುಮಾರೀ, ನನ್ನ ಕೈಗಳನ್ನು ಬಿಡು; ನಿನ್ನನ್ನು ಕಂಡದ್ದಾಯಿತು. ನಾನು ಮರ್ತ್ಯಲೋಕದಲ್ಲಿ ಜನ್ಮವೆತ್ತಿದ ಕಾರ್ಯವು ನೆರವೇರಿತು. ನನಗಿನ್ನು ಅಪ್ಪಣೆ ಕೊಡ' ಎಂದು ಹೇಳಿ ಕುಮಾರಿಯನ್ನಾಲಿಂಗಿಸಿದಳು. ಅದಕ್ಕೆ ಸುಖಲತೆಯು "ತಾಯೀ, ಸತ್ಯಕೊಟ್ಟ ಹೊರತು ನಾನು ನಿಮ್ಮನ್ನು ಹೋಗಗೊಡೆನು. ಪ್ರಾಣತ್ಯಾಗಮಾಡುವುದಿಲ್ಲವೆಂದು ಶಪಥಮಾಡಿಕೊಡಿ. ಇಲ್ಲದಿದ್ದರೆ ನಿಮಗೆ ಮೊದಲು ನಾನೂ ಆತ್ಮಹತ್ಯ ಪ್ರಯತ್ನಮಾಡುತ್ತೇನೆ' ಎನಲು ಮಂಜುಳೆಯು ಚಮಕಿತಳಾಗಿ 'ಪ್ರಿಯಕುಮಾರೀ, ನಿನ್ನಿಂದ ನನ್ನ ವ್ರತಭಂಗವಾಯಿತು. ಇನ್ನು ನನ್ನಿಂದಾಗತಕ್ಕದ್ದೇನಿರುವುದು? ನನಗೆ ನೀನೇ ಗತಿ, ಇದು ಸತ್ಯ. ಪಾಪಿಯಾದ ನನ್ನನ್ನು ರಕ್ಷಿಸುವ ಭಾರವು ದಯಾಮತಿಯಾದ ನಿನ್ನನ್ನೇ ಸೇರಿರುವುದು" ಎಂದು ಹೇಳಿ ದುಃಖಿಸಿದಳು. ಸುಖಲತೆಯು ಚಿಕ್ಕಮ್ಮನ ಕಣ್ಣೀರನ್ನೊರಸಿ ಸಂತೈಸುತ್ತಾ 'ತಾಯಿ, ಈಗೇನೂ ಕಾರ್ಯವು ಮೀರಲಿಲ್ಲ. ನಮ್ಮಲ್ಲುದಿಸಿದ ವಿಷಯಗಳು ನಮ್ಮಲ್ಲಿಯೇ ಲಯಿಸಲಿ. ಇತರರಿಗ ತಿಳಿದರಲ್ಲವೇ ನಗೆಗೀಡಾಗುವುದಕ್ಕೆ? ನಿಮ್ಮಳಿಯನನ್ನು ನೋಡಲುಬನ್ನಿ, ನೀವಿಲ್ಲದಿದ್ದಪಕ್ಷದಲ್ಲಿ ನಾನು ಇಲ್ಲಿ ಕಾಲಿಡುತ್ತಿದ್ದೆನೇ' ಎಂದು ಹೇಳಿ ಅವಳನ್ನು ರಾಜಾ ಅಮರಸಿಂಹ, ಸರ್ದಾರ್‌ಸಿಂಹ ಮೊದಲಾದವರು ಕುಳಿತು ಮಾತನಾಡುತ್ತಿದ್ದ ಬಿಡಾರಕ್ಕೆ ಕರೆದುಕೊಂಡುಹೋದಳು.

ತನ್ನ ದುರ್ನಡತೆಗಾಗಿ ಪಶ್ಚಾತ್ತಾಪಗೊಂಡ ಮಂಜುಳೆಯು ಕುಮಾರಿಯ ಸದ್ಬುದ್ಧಿಯನ್ನು ಕಂಡಾನಂದಭರಿತಳಾದಳು. ರಾಜಾ ಅಮರಸಿಂಹನು ಸುಖಲತೆಯ ಮನೋತ್ಸಾಹವನ್ನೂ, ಪ್ರೇಮವಾತ್ಸಲ್ಯಗಳನ್ನೂ ಕಂಡು ಬೆರಗಾದನು. ರಘು

ನಾಥಸಿಂಹನು ರಾಜಕುಮಾರಿಯ ಆನಂದ ಕಲ್ಯಾಣ ಗುಣಗಳನ್ನು ನೋಡಿ ನೋಡಿ ಪುಳಕಾಂಕಿತ ಹೃದಯನಾದನು.

ಇದೇ ಸರಿಯಾದ ಸಮಯವೆಂದು ತಿಳಿದ ಪದ್ಮಲತೆಯು, ಮಂಜುಳೆಯು ಸುಖಲತೆಗೆ ಬರೆದಿದ್ದ ಕಾಗದವನ್ನು ತೆಗೆದುಕೊಂಡು ಬೇರೇಕಡೆ ಹೋಗಿ ಓದುತ್ತಿರುವಾಗ ಸರ್ದಾರ್‌ಸಿಂಹನೂ, ಪ್ರತಾಪಸಿಂಹನೂ ಅವಳರಿಯದಂತೆ ಮರೆಯಲ್ಲಿ ಸದ್ದು ಮಾಡದೆ ನಿಂತು ಕೇಳುತ್ತಿದ್ದರು. ಪತ್ರವನ್ನೋದಿ ಪೂರ್ತೈಸಿದನಂತರ ರಮಣಿಯು ನಿಟ್ಟುಸಿರುಬಿಟ್ಟುದನ್ನು ಕಂಡ ಸರ್ದಾರ್‌ಸಿಂಹನು 'ಹೌದು, ಹೌದು, ಎಲ್ಲಾ ರಮಣಿಯರ ಗತಿಯೂ ಪರಿಷ್ಕಾರವಾಗಿ ತಿಳಿಯಿತು' ಎನಲು ಪ್ರತಾಪಸಿಂಹನು ನಕ್ಕು— "ಪದ್ಮಾ, ಈಗಲಾದರೂ ಸಂಶಯವು ನಿವೃತ್ತಿಯಾಯಿತೇ? ಇನ್ನಾದರೂ ನಾನು ಕೇಳಿದ ವಿಷಯವನ್ನು ನೆರವೇರಿಸಿಕೊಡಬೇಕು" ಎಂದನು. ಪದ್ಮಲತೆಯು ಲಜ್ಜಿತಳಾಗಿ ನಿಂತಳು





## ೨ ೨ ನೆ ಯ ಅ ಧ್ಯಾ ಯ ವು

### ವಿವಾಹ ಸಂಭ್ರಮವು.

ಪದ್ಮಲತಾ, ಎಲ್ಲಿಹೋದೆ? ನಿನ್ನನ್ನು ಹುಡುಕಿ ಹುಡುಕಿ ನನ್ನ ಕಾಲುಗಳೆಲ್ಲಾ ಹೋದವಮ್ಮಾ-ಎನ್ನುತ್ತಾ ಸುಖಲತೆಯು ನಂದನವನವನ್ನು ಪ್ರವೇಶಿಸಲು, ಮಾನಸಿಂಹನೂ ಮಂದಮತಿಯೂ ಕುಳಿತು ಮಾತನಾಡುವುದನ್ನೂ, ಅವರ ವಿಚಿತ್ರಾಲಂಕಾರವನ್ನೂ ಕಂಡು ಆಶ್ಚರ್ಯದಿಂದ ಸ್ತಬ್ಧಳಾಗಿ ನಿಂತಳು.

ಕೈಯಲ್ಲೆರಡು ಪುಷ್ಪಹಾರಗಳನ್ನು ಹಿಡಿದುಕೊಂಡು ಪದ್ಮಲತೆಯು ಎಲ್ಲಿಂದಲೋ ಬಂದು 'ಏಳಿ ಇದೇ ಪುರುಷಪ್ರಿಯ ವಿವಾಹವು ನಾನು ಪುರೋಹಿತನಾದದ್ದರಿಂದ ನೀವಿಬ್ಬರೂ ನನಗೆ ಬಹುಮಾನ ಕೊಡಬೇಕು" ಎಂದಳು.

ಅದಕ್ಕೆ ಸುಖಲತೆಯು 'ಪದ್ಮಾ, ಏನು ಹುಡುಗಾಟ? ನೋಡಿದವರು ಏನಂದುಕೊಂಡಾರು ಎನ್ನುವುದಾದರೂ ಬೇಡವೇ! ಹುಚ್ಚರನ್ನು ಕಂಡರೆ ನಿನಗೂ ಹುಚ್ಚು ತಲೆಗೇರುತ್ತದೆ' ಎನಲು, ಪದ್ಮಲತೆಯು—'ಸುಖಲತಾ, ನನ್ನನ್ನಾಕ್ಷೇಪಿಸುವುದೆಂದರೆ

ನಿನಗೆ ಬಹಳ ಸುಲಭ. ನಾನು ಸುಮ್ಮನಿರುತ್ತೇನೆ ಅವರನ್ನೂ ಹಾಗೆಯೇ ಇರುವ ಹಾಗೆ ಹೇಳಿದರೆ ನಿನ್ನ ಬುದ್ಧಿಶಕ್ತಿಯನ್ನು ನಾನು ಮೆಚ್ಚುತ್ತೇನೆ; ನಾನು ಹುಡುಗಾಟ ವಾಡುತ್ತೇನೆಯೇ, ಅಥವ ಅವರೇ ನನ್ನನ್ನು ಕರೆದರೇ, ಎನ್ನುವುದನ್ನು ನೀನೇ ಕೇಳಿ ತಿಳಿದುಕೋ' ಎಂದಳು.

ಇಷ್ಟರಲ್ಲಿ ಮಾನಸಿಂಹನು-'ಹುಂ! ಹೊತ್ತಾಯಿತು ನಮ್ಮಿಬ್ಬರಿಗೂ ವಿವಾಹ ವಾಗಲಿ ರಾಜಕುಮಾರಿಯು ಹೇಳುವುದೆಲ್ಲಾ ಸುಳ್ಳು, ನಾನಿನ್ನು ಅವಳ ಜೊತೆಯಲ್ಲಿ ಮಾತನಾಡುವುದೇ ಇಲ್ಲ ಹಾರವನ್ನಿಲ್ಲಿ ಕೊಡು' ಎಂದು ಆತುರಪಡುತ್ತಿದ್ದನು

ಮಂದಮತಿಯು--'ಸರಿ, ಸರಿ; ಭಾರತಿಯು ಪ್ರತ್ಯಕ್ಷಳಾಗಿ ನನ್ನನ್ನು ನಡುನೀರಿನಲ್ಲಿ ಕೈಬಿಟ್ಟಳು ಇನ್ನು ಅವಳು ಮಹಾರಾಜರಿಗೆ ಬಾಧ್ಯಳು. ಶಾಸ್ತ್ರಾಭ್ಯಾಸಕ್ಕೆ ನನಗೆ ಹೊತ್ತಾಯಿತು. ಜಾಗ್ರತೆ ನನಗೆ ವಿವಾಹ ಮಾಡದಿದ್ದರೆ ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ. ಹೂ ಮಾಲೆಯನ್ನಿಲ್ಲಿತಾ' ಎಂದು ಆರ್ಭಟಿಸುತ್ತಿದ್ದನು.

ಸುಖಲತೆಯು--''ಪದ್ಮಾ, ಈ ಮಂದಮತಿಗಳನ್ನು ಕಟ್ಟಿಕೊಂಡಳುವುದೇ ನಿನ್ನ ಹಣೆಯಬರಹವಾಯಿತು ನಿನ್ನ ಜನಕನು ನಿನ್ನನ್ನು ನೋಡಲು ಆತುರಪಡುತ್ತಿರುವುದರಿಂದ ನಿನ್ನನ್ನು ಹುಡುಕಿಕೊಂಡು ಬಂದೆನು. ಹೋಗೋಣ ಬಾ,' ಎನಲು ಪದ್ಮಲತೆಯು—ಸುಖಲತಾ, ಏನೂ ಬೇಡ, ನಾನು ಬರುವುದಿಲ್ಲ ತಂದೆಗೂ, ನನಗೂ ಸಂಬಂಧವೆಲ್ಲಿಯದು? ನನಗೆ ನೋಡಬೇಕೆಂಬ ಅಪೇಕ್ಷೆಯುಂಟಾದಾಗ ನಾನು ಯಾರ ದಯಸಿರೀಕ್ಷಣೆಯೂ ಇಲ್ಲದೆ ನೋಡಿಕೊಳ್ಳುತ್ತೇನೆ. 'ಹೂವಿನಿಂದ ನಾರು ಸ್ವರ್ಗಕ್ಕೆ' ಎಂಬಂತೆ ನಿನಗೆ ಶುಭಕಾಲವೊದಗಿದ್ದರಿಂದ ನನಗೂ ಶುಭಕಾಲವೊದಗಿತು. ನನಗಿನ್ನು ಯಾರ ದಯವೂ ಅವಶ್ಯಕವಿಲ್ಲ. ಸ್ವಲ್ಪ ತಡೆದರೆ ಈ ವಿಜಾತೀಯ ದಂಪತಿಗಳನ್ನು ನೋಡಬಹುದು ಈ ದಂಪತಿಗಳು ದೀರ್ಘಕಾಲ ಸುಖವಾಗಿರುವಂತೆ ಆಶೀರ್ವದಿಸಿ ಆಮೇಲೆ ಹೊರಡೋಣ' ಎಂದಳು.

ಇಷ್ಟರಲ್ಲೇ ರಮಾ, ಮಂಜುಳಾ, ಮಂಜುಳೆಯ ಸಹೋದರಿ ಮೊದಲಾದವರು ಅಲ್ಲಿಗೆ ಬಂದರು.

ಇವರು ಬಂದದ್ದನ್ನು ಕಂಡ ಮಂದಮತಿಗಳಿಬ್ಬರೂ-'ಬನ್ನಿ ಬನ್ನಿ. ಈಗ ನಮ್ಮಿಬ್ಬರಿಗೂ ವಿವಾಹವಾಗುತ್ತದೆ. ನಿಮಗೆಲ್ಲಾ ಎಂದೋ ಆಯಿತು. ಸುಖಲತೆಗೂ ಪದ್ಮಲತೆಗೂ ಇನ್ನೂ ಎರಡು ಮೂರು ದಿನಗಳಲ್ಲಿ ಮದುವೆಯಾಗುವುದು' ಎಂದು ಕುಣಿದಾಡುತ್ತಿದ್ದರು.

'ಶಿವ ಶಿವ ! ಹುಚ್ಚನೊಬ್ಬನೇ ಸಾಕಾಗಿತ್ತು ಈಗ ಎರಡಾಯಿತು. ಇನ್ನೇನು ಕಡವೆ. ಇವರಿಬ್ಬರನ್ನೂ ಬೇರೆ ಬೇರೆಯಾಗಿ ಕಾರಾಗೃಹದಲ್ಲಾದರೂ ಕೂಡಬಾರದೇ!' ಎಂದು ಮಂಜುಳೆಯು ಸೇವಕನನ್ನು ಕರೆದಳು.

ಇದನ್ನು ಕೇಳಿದ ಮಂದಮತಿಗಳಿಬ್ಬರೂ 'ಹೂಂ! ಅದಾಗದು, ಇನ್ನು ನಾವಿಬ್ಬರೂ ಒಂದೇಕಡೆ ಇರುತ್ತೇವೆ. ನಮ್ಮಿಬ್ಬರನ್ನೂ ಅಗಲಿಸಲು ಸೀಸದಿಂದ ಕೂಡ ಆಗದು' ಎಂದು ಆ ದಿನ ಸುಖಲತೆಯು ಪದ್ಮಲತೆಯೊಡನೆ ಹೇಳಿದಳು. ಅದು ಸುಳ್ಳೋ? ಬೇಕಾದರ ಕೇಳಿನೋಡಿ' ಎಂದರು.

ಹುಚ್ಚರ ಮಾತನ್ನು ಕೇಳಿ ಎಲ್ಲರೂ ಬಿದ್ದು ಬಿದ್ದು ನಗಲಾರಂಭಿಸಿದರು. ಮಾನಸಿಂಹನು ಅಲ್ಲಿದ್ದವರನ್ನೆಲ್ಲಾ ನಮಸ್ಕರಿಸಲಾರಂಭಿಸಿದನು. ಮಂಜುಳೆಯು ತಡೆಯಲಾರದವಳಾಗಿ ಮಾನಸಿಂಹನನ್ನು ಹೊಡೆಯಲು ಹೋಗಲು ಸುಖಲತೆಯು ಅವಳನ್ನು ತಡೆದು 'ಜ್ಞಾನಶೂನ್ಯರನ್ನು ಹಿಂಸಿಸುವುದು ಅತಿ ಪಾಪವು. ಸಮಾಧಾನ ವಾಕ್ಯಗಳಿಂದ ನಾನವನನ್ನು ಸುಮ್ಮನಿರುವಂತೆ ಹೇಳುತ್ತೇನೆ, ಅವನಮೇಲೆ ಸಿಟ್ಟು ಮಾಡಿಕೊಳ್ಳಬೇಡಿ' ಎಂದು ಮಂಜುಳೆಯನ್ನು ಸಮಾಧಾನಗೊಳಿಸಿದಳು.

ಇನ್ನು ಆಟವಾಡಬಾರದೆಂದೆಣಿಸಿ ಪದ್ಮಲತೆಯು ಹೊರಟುಹೋದಳು.

ಪದ್ಮಲತೆಯ ಬಲತಾಯಿಯಾದ ಮಂಜುಳೆಯ ಸಹೋದರಿಯು ಪದ್ಮಲತೆಯ ಸಮೀಪಕ್ಕೆ ಬಂದು--'ಮಗೂ, ನಾನು ನಿನ್ನ ಚಿಕ್ಕಮ್ಮ. ಇದೋ ಇಲ್ಲಿ ನಿಂತಿರುವವರು ನಿನ್ನ ಸಹೋದರರು ನಿನ್ನ ತಂದೆಯನ್ನು ನೋಡುವೆಯಂತೆ ಬಾ' ಎಂದು ಕೈ ಹಿಡಿದುಕೊಂಡು ಪ್ರೀತಿಯಿಂದ ಕರದಳು.

'ಹಾಗೆಯೆ! ಒಳ್ಳೆಯದು, ನನಗೂ ಬಂಧುಗಳಿರುವುದು ಆಶ್ಚರ್ಯವನ್ನುಂಟುಮಾಡುವುದು. ತಾಯೇ, ತಾವೂ ಮಂಜುಳೆಯೂ ಸಹೋದರಿಯರಾದ್ದರಿಂದ ಏಕಕಾಲದಲ್ಲಿ ಪುತ್ರಿಯರಲ್ಲಿ ಪ್ರೀತಿಗೊಂಡಿರಿ ಇದನ್ನು ಕಂಡು ನನಗೆ ಬಹಳ ಸಂತೋಷವಾಯಿತು. ನನ್ನ ಸಹೋದರರಾದರೂ ಸೌಖ್ಯವಾಗಿರಲಿ' ಎಂದು ಪದ್ಮಲತೆಯು ಹೇಳಲು, ಸುಖಲತೆಯು—'ಪದ್ಮಾ, ಇದೇನು ! ಹುಚ್ಚು ಹುಚ್ಚಾಗಿ ಮಾತನಾಡುವೆ' ಎನಲು ಪದ್ಮಲತೆಯು ನಕ್ಕಳು ಇಷ್ಟರಲ್ಲೇ ರಾಜಾ ಅಮರಸಿಂಹನೂ ಪದ್ಮಲತೆಯ ತಂದೆಯೂ ಪದ್ಮಲತೆಯನ್ನು ಹುಡುಕಿಕೊಂಡು ಬರಲು ಮಂದಮತಿಯೂ, ಮಾನಸಿಂಹನೂ ತಮ್ಮ ವಿವಾಹ ವೈಭವವನ್ನು ಹೇಳಿ ನಮಸ್ಕರಿಸಿದರು.

ಇದೇನಾಶ್ಚರ್ಯವೆಂದು ಅವರೆಲ್ಲರೂ ಭ್ರಮಿಸಿ ನಿಂತಿರಲು ಸರ್ದಾರ್‌ಸಿಂಹನೂ, ಪ್ರತಾಪಸಿಂಹನೂ ತಮ್ಮ ತಮ್ಮ ಸತೀಮಣಿಯರನ್ನು ಹುಡುಕಿಕೊಂಡು ಅಲ್ಲಿಗೆ ಬಂದರು. ಮತಿಹೀನರಿಬ್ಬರೂ ಮೊದಲಿನಂತೆಯೇ ಅವರಿಬ್ಬರನ್ನೂ ನಮಸ್ಕರಿಸಿದರು.

ನಡೆದ ವಿಷಯುಗಳನ್ನರಿತ ಸರ್ದಾರ್‌ಸಿಂಹನು ಪರಿತಾಪದಿಂದ ಉನ್ಮತ್ತರಿಬ್ಬರನ್ನೂ, ಮಾನಸಿಂಹನನ್ನೂ, ಮಂದಮತಿಯನ್ನೂ ತನ್ನೊಡನೆ ಕರೆದುಕೊಂಡು ಹೋದನು.

ಪದ್ಮಲತೆಯ ತಂದೆಯು ಮಗಳನ್ನು ಕಂಡು--'ಪುತ್ರೀ, ನಿನ್ನ ಜನಕನೆಂದು ಹೇಳಿಕೊಳ್ಳಲು ಕೂಡ ನನಗೆ ಲಜ್ಜೆಯಾಗಿರುವುದು. ನನ್ನಲ್ಲಿ ಕೋಪಮಾಡದೆ ಮಾತನಾಡುವಳಾಗು' ಎಂದು ಹೇಳಲು, ಸುಖಲತೆಯ ಕಾಟವನ್ನು ತಡೆಯಲಾರದೆ ಪದ್ಮಲತೆಯು ತಂದೆ, ಚಿಕ್ಕಮ್ಮ, ರಾಜಾ ಅಮರಸಿಂಹ, ಮಂಜುಳೆ ಮೊದಲಾದವರನ್ನು ನಮಸ್ಕರಿಸಿದಳು

ರಮಣಿಯರಿಬ್ಬರನ್ನೂ ಏಕಕಾಲದಲ್ಲಿ ಕಂಡವರು ದೇವಲೋಕ ಸ್ತ್ರೀಯರೆಂದು ಭ್ರಮಿಸುತ್ತಿದ್ದರು.

ದೇಶಾಧಿಪತಿಗಳೂ, ಸಾಮಂತ, ಶ್ರೀಮಂತ, ನರಪತಿ, ಭೃಗಪತಿ, ಮೊದಲಾದ ರಾಜರುಗಳೂ, ಅನೇಕ ಪ್ರಭುವರ್ಯರೂ ವಿವಾಹ ಮಹೋತ್ಸವಕ್ಕೆ ಆಮಂತ್ರಿತರಾಗಿ ಬಂದರು. ಅವರವರಿಗೆ ತಕ್ಕ ಬಿಡಾರಗಳನ್ನು ರಾಜಾ ಅಮರಸಿಂಹನು ಸಿದ್ಧಮಾಡಿಸಿದ್ದನು. ಅಜ್ಮೀರ್, ಬಿಕನೀರ್, ಜಯಪುರ, ಜ್ಯೋತಿಪುರ, ಉದಯಪುರ, ಕಾಶ್ಮೀರ ವಂಗ, ಕಳಿಂಗ ಮೊದಲಾದ ಐವತ್ತಾರು ದೇಶದ ರಾಜಾಧಿರಾಜರುಗಳೂ ರಾಜಕುಮಾರಿಯ ವಿವಾಹ ವೈಭವವನ್ನು ಕಂಡಾನಂದಿಸಿದರು.

ದೇವಾಲಯಗಳಲ್ಲೆಲ್ಲಾ ಅರ್ಚನೆ, ಅಭಿಷೇಕ, ಪ್ರಾರ್ಥನೆ ಮೊದಲಾದವುಗಳು ನಡೆದವು. ದೀನಾನಾಥರಿಗೂ, ಅಂಗಹೀನರಿಗೂ, ವಸ್ತ್ರಾಹಾರಗಳು ಧಾರಾಳವಾಗಿ ಕೊಡಲ್ಪಟ್ಟವು. ವಿಪ್ರರಿಗೆ ಸಂಭಾವನೆಗಳೂ, ಪ್ರಭುಗಳಿಗೆ ಬಹುಮಾನವೂ, ವಿದ್ವಾಂಸರಿಗೆ ಸನ್ಮಾನವೂ ಕೊಡಲ್ಪಟ್ಟಿತು ಚತುಶ್ಯಾಸ್ತ್ರ ಪಂಡಿತರನ್ನು ದೀಕ್ಷಿಸಲು ಗುರುಮಹಾರಾಜನು ನಿಂತನು. ಆತನ ಪತ್ನಿಯಾದ ರಮೆಯು ರಾಜಮಹಿಷಿಯರನ್ನೂ, ಸೀಮಂತಿನಿಯರನ್ನೂ ಮರ್ಯ್ಯಾದೆಯಿಂದುಪಚರಿಸುತ್ತಿದ್ದಳು.

ಅಮಾತ್ಯಶೇಖರನಾದ ರಘುನಾಥಸಿಂಹನಿಗೆ ನಡೆದ ಉಪಚಾರಕ್ಕಳವಿಲ್ಲ ಶುಭ ಮುಹೂರ್ತದಲ್ಲಿ ಸುಖಲತಾ-ಸರ್ದಾರ್‌ಸಿಂಹ, ಪದ್ಮಲತಾ-ಪ್ರತಾಪಸಿಂಹ ಮೊದಲಾದವರ ವಿವಾಹವು ಅತಿ ವಿಜೃಂಭಣೆಯಿಂದ ನಡೆಯಿತು ಪದ್ಮಲತೆಯ ತಂದೆಯು ಮಗಳಿಗೆ ಅನೇಕ ಲಕ್ಷ ರೂಪಾಯಿ ಬೆಲೆ ಬಾಳತಕ್ಕ ವಸ್ತ್ರಾಭರಣ, ಧನ ಕನಕ ವಾಹನಾದಿಗಳನ್ನು ಉಡುಗೊರೆಯಾಗಿ ಕೊಟ್ಟನು

ರಾಜಾ ಅಮರಸಿಂಹನ ರಾಜ್ಯಕ್ಕೆ ಸುಖಲತೆಯು ಅಧಿಕಾರಿಯಾದಳು ಈದಿನ ನನ್ನ ಮನಸ್ಸಿಗಾನಂದವಾಯಿತೆಂದು ರಾಜಾ ಅಮರಸಿಂಹನು ಆನಂದಬಾಷ್ಪ ಸುರಿಸಿಸಿದನು ಮಂಜುಳೆಯು ಪರಮಾನಂದದಿಂದ 'ಕಲಾರತ್ನವಾದ ಕುಮಾರಿಯೇ, ನಿನ್ನ ವಿವಾಹ ಸಂಭ್ರಮವನ್ನು ಕಂಡಾನಂದಿಸುವ ಪುಣ್ಯವು ನನಗಿತ್ತಲ್ಲವೇ' ಎಂದು ಕುವರಿಯನ್ನಾಲಿಂಗಿಸಿಕೊಂಡಳು.

ಸಕಲ ಜನರೂ ಆನಂದದಿಂದ ರಾಜ ದಂಪತಿಗಳನ್ನು ಹರಸಿದರು ಅಮಾತ್ಯ ರಘುನಾಥಸಿಂಹನು ಆನಂದಭರಿತನಾಗಿ ಶುಭದಿನದಲ್ಲಿ ರಾಜಕುಮಾರಿಯನ್ನು ಬಿಕನೀರಿಗೆ ಕರತರಬೇಕೆಂದು ರಾಜಾ ಅಮರಸಿಂಹನಿಗೆ ಹೇಳಿದನು. ವಿವಾಹಕ್ಕೆ ಬಂದಿದ್ದವರೆಲ್ಲರೂ ವಧೂವರರ ಗುಣವನ್ನೂ, ಸೌಂದರ್ಯ ರೂಪವನ್ನೂ ವರ್ಣಿಸುತ್ತ ತಮ್ಮ ಪಟ್ಟಣಗಳಿಗೆ ತೆರಳಿದರು.



## ೨೩ನೆಯ ಅಧ್ಯಾಯವು.

### ಧರ್ಮೋಪದೇಶನವು.




ಕನೀರ್ ಪಟ್ಟಣದಲ್ಲಿ 'ದೇವೀಸದನ' ವೆಂಬೊಂದು ಕನ್ಯಾಗುರುಕುಲವು ವಿಶಾಲವಾದುದೊಂದು ಕಟ್ಟಡದಲ್ಲಿ ನಡೆಸಲ್ಪಡುತಿತ್ತು ಆ ಪಾಠಶಾಲೆಯ ಪ್ರಾರ್ಥನಾ ಮಂದಿರದಲ್ಲಿ ಸುಖಲತೆಯ ತೈಲ ಚಿತ್ರಪಟವೊಂದು ಬರತಕ್ಕವರಿಗೆ ಸುಖಾಗಮನವನ್ನು ಬಯಸುತಿದ್ದಿತು 'ಹರಿಓಂ' ಎನ್ನತಕ್ಕ ಪ್ರಥಮ ತರಗತಿಯಿಂದ ಶಾಸ್ತ್ರಾಭ್ಯಾಸದ ತರಗತಿಯವರೆಗೆ ಅಲ್ಲಿ ಸ್ತ್ರೀಯರಿಗೆ ವಿದ್ಯಾಭ್ಯಾಸವು ನಡೆಯುತಿದ್ದಿತು. ಸುಖಲತೆಯು ತಾನು ರಾಜಪುತ್ರಿಯೆನ್ನುವುದನ್ನೂ, ರಾಜಮಹಿಷಿಯೆನ್ನುವುದನ್ನೂ ಸ್ವಲ್ಪವೂ ಅಭಿಮಾನಿಸದೆ ಅಹಂಕಾರ ವರ್ಜಿತಳಾಗಿ ಪ್ರತಿ

ದಿನವೂ ಎರಡು ಘಂಟೆಯ ಹೊತ್ತು ಬಾಲಿಕಾಮಣಿಗಳಿಗೆ ತಾನೇ ಸ್ವತಃ ಪಾಠಹೇಳು ತಿದ್ದಳು. ' ಬಾಲಕರಿಗೆ ವಿದ್ಯಾಶಾಲೆ. ಭೋಜನಶಾಲೆ, ವೇದಾಭ್ಯಾಸಭವನ, ತತ್ವ ವಿಚಾರಮಠ, ಅನಾಥಪೋಷಕಾಲಯ, ಚಿತ್ರಕಲಾಭ್ಯಾಸಮಂದಿರ, ವ್ಯಾಯಾಮಶಾಲೆ ವೈದೀಕ ವಿದ್ಯಾಭ್ಯಾಸಮಾಡಲು ಅನುಕೂಲವಾದ ಕಟ್ಟಡ ಮೊದಲಾದ ಅನೇಕ ಭವ ನಗಳನ್ನು ನಿರ್ಮಿಸಿದಳು. ಮತಾಭಿಮಾನಿಗಳ ಮನಃ ಕೊರತೆಗಳನ್ನು ನಿವೃತ್ತಿಸಲು ಅನೇಕ ಪೂಜಾಗೃಹಗಳನ್ನೂ, ಮಂತ್ರಾಲೋಚನಸಭೆಗಳನ್ನೂ ನಿರ್ಮಿಸಿದಳು ವೃದ್ಧರಾದವರಿಗೆ ಉಪಕಾರ ಸಂಬಳವನ್ನು ಕೊಟ್ಟು ಅವರ ಜೀವನವು ಸುಖವಾಗಿ ನಡೆಯುವಂತೇರ್ಪಡಿಸಿದಳು. ತನ್ನ ರಾಜ್ಯದ ಎಲ್ಲೆಯಲ್ಲೆಲ್ಲಾ ಧರ್ಮಸ್ಥಾಪನೆಗನು ಕೂಲವಾದ ಅನೇಕ ಕಾರ್ಯಗಳನ್ನು ಮಾಡಿದಳು ತಾನೆನ್ನುವ ಅಹಂಕಾರವನ್ನು ಕನಸಿನಲ್ಲಿಯೂ ಸ್ಮರಿಸದವಳಾಗಿ ತನ್ನ ರಾಜ್ಯದ ಪ್ರಜೆಗಳ ಸುಖಕ್ಕಾಗಿ ದಿವಾ ರಾತ್ರಿ ಯೂ ದುಡಿಯುತಿದ್ದಳು ಮರ್ತ್ಯಲೋಕದಲ್ಲಿ ಜನ್ಮವೆತ್ತಿದ್ದೇತಕ್ಕೆಂಬ ಪ್ರಶ್ನೆಯನ್ನು ಪ್ರತಿದಿನವೂ ಸಾವಿರಸಲ ತನ್ನನ್ನು ತಾನೇ ಕೇಳಿಕೊಂಡು ಸದಾ ಭಗವಧ್ಯಾನಮಾಡು ತ್ತಾ ರಾಜ್ಯಕ್ಷೇಮಕ್ಕಾಗಿ ಪಾಡುಪಡುತ್ತಿದ್ದಳು

ಇಹಪರದೈವವು ತನ್ನ ಪ್ರಾಣಪತಿಯೇ ಎಂದು ದಿವಾರಾತ್ರಿಯೂ ಆತನ ದಿವ್ಯ ನಾಮವನ್ನೇ ಸ್ಮರಿಸುತ್ತಾ ಆತನ ಸೇವೆಯಲ್ಲೇ ಮಗ್ನಳಾಗಿರುವಳು ಸರ್ದಾರ್‌ಸಿಂ ಹನನ್ನು ಸಾಕ್ಷಾತ್ ಪರದೈವವೆಂದೆಣಿಸಿ ಕಾಯಾ, ಮನಸಾ, ವಾಚಾ ಪೂಜಿಸುವಳು ಯಾರಾದರೂ ಶುಷ್ಕಕಲಹಿಗಳಾಗಿ ವಿವಾದವನ್ನು ವಿಚಾರಣೆಗಾಗಿ ಅರಮನೆಗೆ ತಂದರೆ ಆ ವಿಷಯವನ್ನು ತನ್ನ ಕಿವಿಗೆ ಹಾಕಿಕೊಳ್ಳದೆ ಪದ್ಮಲತೆಯ ಬಳಿ ಕಳುಹಿಸುವಳು. ರಾಜಕಾರ್ಯಗಳನ್ನು ನಿಧಾನವಾಗಿಯೂ, ದೀರ್ಘಾಲೋಚನೆಯಿಂದಲೂ ನಿರ್ವಹಿಸ ಬೇಕೆಂದು ಪತಿಯನ್ನು ಪ್ರಾರ್ಥಿಸುವಳು

'ನಾವಿಷ್ಣುಃ ಪೃಥಿವೀಪತಿಃ' ವಿಷ್ಣುವಿನ ಅಂಶವಿಲ್ಲದೆ ಯಾವನೂ ಅರಸನಾಗ ಲಾರನು ಎಂದು ಏತಕ್ಕೆ ಹೇಳುವರು. ನ್ಯಾಯವು ಸ್ಥಿರವಾಗಿ ನೆಲಸಿರಬೇಕೆಂದಲ್ಲವೇ ಪ್ರಜೆಗಳು ಅರಸನನ್ನು ಏರ್ಪಡಿಸುವರು. ರಾಜಪದವಿಯು ಸ್ವಂತ ಸುಖಕ್ಕಾಗಲ್ಲ. ದೇವರ ಪವಿತ್ರವಾದ ಕಟ್ಟಳೆಗಳನ್ನು ನೆರವೇರಿಸುವುದಕ್ಕಾಗಿ ಈ ರಾಜಪದವಿಯು ತಮಗೆ ಕೊಡಲ್ಪಟ್ಟಿರುವುದೆಂದು ತಿಳಿಯಿರಿ ನಿದ್ರೆಯು ಪರನು ಶತ್ರುವಾದದ್ದರಿಂದ ಅದನ್ನೆಂದೂ ನಂಬಬೇಡಿ' ಎಂದು ಪತಿಗೆ ವಿನಯದಿಂದ ಹೇಳುವಳು. ಸುಖಲತೆ ಯನ್ನು ಕಾಣದಿದ್ದರೆ ಸರ್ದಾರ್‌ಸಿಂಹನಿಗೆ ಬುದ್ಧಿಭ್ರಮೆಯಾದಂತಾಗುವುದು

ಪದ್ಮಲತೆಯೂ, ಪ್ರತಾಪಸಿಂಹನೂ ಪ್ರಜಾಸೇವೆಗೆ ತಮ್ಮ ತನು-ಮನವನ್ನರ್ಪಿಸುತ್ತಿದ್ದರು ರಾಜಾ ಅಮರಸಿಂಹನು ಬಿಕನೀರಿಗೆ ಬಂದು ತನ್ನ ಮಗಳ ಖ್ಯಾತಿಯುನ್ನು ಕಣ್ಣಾರಕಂಡು ಪರಮಾನಂದಭರಿತನಾದನು ಮಂಜುಳೆಯ ಅಹಂಕಾರವು ಅದೆಲ್ಲೋ ಮಾಯವಾಯಿತು. ಉತ್ತಮಳೆನ್ನುವ ಹೆಸರನ್ನು ನಿಮಿಷಮಾತ್ರದಲ್ಲಿ ಪಡೆದಳು ವೃದ್ಧಪತಿಯ ಸೇವೆಯನ್ನು ಶ್ರದ್ಧೆಯಿಂದ ಮಾಡುತ್ತಾ ಸಕಲದೈವವೂ ಆತನೇ ಎಂದೆಣಿಸಿ ನಡೆಯುತ್ತಿದ್ದಳು

ಗುರುಮಹಾರಾಜನ ಪತ್ನಿಯಾದ ಸುಮನಾದೇವಿಯು ಸುಖಲತೆಯೊಡನೆ ಇರುತ್ತಿದ್ದಳು. ಮಂಜುಳೆಯು ಪದೇ ಪದೇ ಪುತ್ರಿಯನ್ನು ಕಾಣಲು ಬರುತ್ತಿದ್ದಳು 'ಧರ್ಮೋಪದೇಶಮಾಡಿದ ತತ್ವದರ್ಶಿಯೇ' ಎಂದು ಪುತ್ರಿಯನ್ನಾಲಿಂಗಿಸಿಕೊಳ್ಳುವಳು

ಪ್ರತಿದಿನವೂ ಗುರುಮಹಾರಾಜರು ರಜಮಹಿಷಿಗೆ ಸ್ವಲ್ಪಹೊತ್ತು ತತ್ವವಿಚಾರಗಳನ್ನು ತಿಳಿಸುತ್ತಿದ್ದರು. ಅಂತರ್ ಬಹಿರ್ರೂಪದಿಂದ ಈಶ್ವರನನ್ನಾರಾಧಿಸಬೇಕೆಂದು ಅವರು ಹೇಳಿದಾಗ ಆ ವಾಕ್ಯಗಳು ಸುಖಲತೆಯ ಮನಸ್ಸಿನಲ್ಲಿ ಸ್ವರ್ಣಾಕ್ಷರಗಳಿಂದ ಕೆತ್ತಲ್ಪಟ್ಟವು. ರಮಣಿಯು ಯೋಚಿಸತೊಡಗಿದಳು. 'ಈಶ್ವರನು ಯಾರು? ಅರ್ಧನಾರೀಶ್ವರನೆನ್ನುವ ನಾಮಧೇಯವೇತರಿಂದುಂಟಾಯಿತು? ನನಗೆ ನನ್ನ ಪ್ರಾಣಕಾಂತನೇ ಪರದೈವವಲ್ಲದೆ ಬೇರೇ ದೇವರಿಲ್ಲ ಮುಕ್ತಿಲತೆಯು ಆತನೇ! ಜ್ಞಾನಗುರು ಪತಿಯೇ, ಕೃಪಾಸಮುದ್ರನು ನನ್ನ ಭರ್ತನೇ. ಮತ್ತೆಲ್ಲಿಹೋದರೂ ಧರ್ಮದರ್ಶನವಾಗದು. ಸುತ್ತಿ ಸುತ್ತಿ ಅಲೆದರೂ ಸ್ತ್ರೀಯರಾದ ನಾವು ಅಬಲೆಯರು ನಮಗೆ ಅಂತರ್ ಬಹಿರ್ರೂಪದಿಂದ ಕಟಾಕ್ಷಿಸುವರು ಪ್ರಾಣಪತಿಯರೇ, ನನ್ನ ಮನೋರಮಣನಿಂದ ನನಗೆ ಮುಕ್ತಿಯುಂಟಾಗುವುದು. ನನ್ನ ಜ್ಞಾನದಾತನು ಆತನೇ ಪತಿಧರ್ಮ ಪರಿಪಾಲನಗೈದಹೊರ್ತು ಧರ್ಮದರ್ಶನವೆಲ್ಲಿ ದೊರಕುವುದು? ಸ್ತ್ರೀಯಾಗಿ ಜನಿಸಿದ ಪ್ರತಿಯೊಬ್ಬರೂ ಸಾಧ್ವೀ ರಮಣಿಯರಾಗಿ ಸಾವಿತ್ರೀ, ಸೀತಾದೇವಿಯರಂತೆ ಪತಿಧರ್ಮ ಪರಾಯಣೆಯರಾಗಿ ಬಾಳಿ. ಇದೇ ಇಹಪರ ಧರ್ಮಸಾಧನವು. ಇದರಲ್ಲಿ ಗರ್ಭಿತವಾಗಿರುವ ತತ್ವದರ್ಶನವು ಮತ್ತೆಲ್ಲಿಯೂ ದೊರೆಯದು. 'ಮನಸ್ಸಿದ್ದರೆ ಮಾರ್ಗವುಂಟು' ಯಾವುದಕ್ಕೂ ಮನೋಕೃಷಿಯು ಮುಖ್ಯವು. ದುಃಖಕ್ಕೆಡೆಗೊಡದೆ ಮನಸ್ಸನ್ನು ನಿಶ್ಚಲವಾಗಿಟ್ಟುಕೊಂಡಿರುವವರೆಗೆ ಧರ್ಮವು ಬೆಳೆದು ಹಬ್ಬುವುದರಲ್ಲಿ ತಡೆಯಿಲ್ಲ. ಧರ್ಮದರ್ಶನದ ಮಾರ್ಗವು ಈದಿನ ನನಗೆ ತಿಳಿಯಿತು ಎಂದಾನಂದಭರಿತಳಾದಳು.

ತನ್ನ ಬಳಿ ಸಾಂತಕಲಿಯಲು ಬರತಕ್ಕ ಪ್ರತಿಯೊಬ್ಬ ರಮಣಿಗೂ ಮತಧರ್ಮ ವನ್ನೂ, ಧರ್ಮರಹಸ್ಯವನ್ನೂ ತಿಳಿಸಿ ಅದರಂತೆ ನಡೆಯಬೇಕೆಂದು ಬೋಧಿಸುವಳು. ಸುಖಲತೆಯಿದ್ದ ನಗರವು ಸ್ವರ್ಗವೆಂದು ಪುರನಿವಾಸಿಗಳು ಹೇಳಿಕೊಳ್ಳುತ್ತಿದ್ದರು

ರಾಜಕುಮಾರಿಯೂ, ರಮಣೀ ತಿಲಕವೂ, ರಾಜಮಹಿಷಿಯೂ, ರಾಜರಾಜೇಶ್ವರಿಯೂ ಆದ ಸುಖಲತೆಯನ್ನು ಬಿಕನೇರ್ ಮತ್ತು ಅಜ್ಮೀರ್ ಪ್ರಜೆಗಳು ತಮ್ಮ ಕುಲದೈವವೆಂದೆಣಿಸಿ ನಡೆಯುತ್ತಿದ್ದರು. ಸುತ್ತುಮುತ್ತಲಿನ ಗ್ರಾಮವಾಸಿಗಳಿಗೆ ರಾಜದರ್ಶನ, ಸಂಭಾಷಣೆ, ಸುಖಾವಾಸೇತ್ಯಾದಿಗಳು ದೊರಕುವುದು ದುರ್ಲಭವೆಂದೆಣಿಸಿ ಸುಖಲತೆಯು ಪದೇಪದೇ ಸರ್ದಾರ್‌ಸಿಂಹನೊಡನೆ ಆ ಗ್ರಾಮಗಳಿಗೆ ಹೋಗಿ ಅಲ್ಲಿರುವ ಜನರ ಕಷ್ಟಸುಖಗಳನ್ನು ತಿಳಿದು ಮಾಡತಕ್ಕ ಸಹಾಯವನ್ನು ಮಾಡುವಳು. ವಿರಾಮಕಾಲದಲ್ಲಿ ತನ್ನ ಪತಿಯೊಡನೆ ರಾಜ್ಯಸಂಬಂಧ, ಧರ್ಮಸಂಬಂಧ, ತತ್ವಸಂಬಂಧ ವಿಷಯಗಳಲ್ಲಿ ಯೋಚಿಸುವಳು ಅಮಾತ್ಯರಘುನಾಥನ ಮನಸ್ಸಿಗುಂಟಾದ ಆನಂದಕ್ಕೆ ಅಳವಿಲ್ಲ 'ರಾಜ್ಯದ ಅಧಿದೇವತೆಯೇ ಮಹಾರಾಣಿಯಾಗಿ ಬಂದಿರುವುದರಿಂದ ಈ ರಾಜ್ಯಕ್ಕೆ ಏನೂ ಕೊರತೆಯಿಲ್ಲ ಒಂದುವೇಳೆ ಮಹಾರಾಜನು ತಪ್ಪುಮಾರ್ಗವನ್ನವಲಂಬಿಸಿದರೂ ಚತುರೆಯಾದ ರಾಜಮಹಿಷಿಯು ಅವನನ್ನು ಸನ್ಮಾರ್ಗಕ್ಕೆ ತರುವಳಾದ್ದರಿಂದ ನನಗೆ ಯಾವ ಚಿಂತೆಯೂ ಇಲ್ಲದೆ ಇನ್ನು ನನ್ನ ಕಾಲವನ್ನು ಈಶ್ವರಧ್ಯಾನದಲ್ಲಿ ಕಳೆಯಬಹುದು ರಮಣಿಯು ಚತುರಳಾಗಿದ್ದರೆ ರಮಣನನ್ನು ಉತ್ತಮರೀತಿಯಿಂದ ನಡೆಸುವಳು ಇನ್ನು ನನಗೇಕೀ ಚಿಂತೆ' ಎಂದು ತನ್ನಲ್ಲಿ ತಾನೇ ಹೇಳಿಕೊಂಡನು

ರಾಜದಂಪತಿಗಳ ಉತ್ತಮ ಮಹಿಮೆಯನ್ನರಿತ ಜಗದೀಶನು ಸರ್ವ ಕ್ಷೇಮಗಳನ್ನೂ ಆ ರಾಜ್ಯದ ಪ್ರಜೆಗಳಿಗೆ ಕೊಟ್ಟು ಸದಾ ಸುಖಿಗಳಾಗಿರುವಂತೆ ಅನುಗ್ರಹಿಸಿದನು ಪ್ರಜೆಗಳೆಲ್ಲರೂ ಮಹಾರಾಣಿಯ ಸರ್ವೋತ್ತಮ ಗುಣಗಳನ್ನು ಕೊಂಡಾಡುತ್ತ ಸುಖದಿಂದಿದ್ದರು.

